ಆದ ಮದ್ಯವನ್ನು ಬ್ರಹ್ಮಕ್ಷತ್ರ ವೈಶ್ಯರು ವರ್ಜಿಸಬೇಕು. "ದ್ಯೂತಂ ಸ್ತ್ರೀಮದ್ಯಮೇವೈತತ್ ಒಹ್ವನ-ರ್ಥಕೃತ್" ಎಂದು ಶುಕ್ರನೀತಿಯೂ ಸಾರುತ್ತದೆ.

ಇನ್ನೊಂದು ವೇದಮಾತೆಯ ಆದೇಶವೇನೆಂದರೆ ಮನುಷ್ಯನು ಶ್ರದ್ಧೆಯನ್ನೂ ಮೇಧೆಯನ್ನೂ ಅಭಿವೃದ್ಧಿಗೊಳಿಸಬೇಕೆಂಬುದು. "ಯಾಂ ಮೇಧಾಂ ದೇವಗಣಾಃ ಪಿತರಶ್ಚೋಪಾಸತೇ, ತಯಾ ಮಾ ಮದ್ಯ ಮೇಧಯಾಗ್ನೇ ಮೇಧಾವಿನಂ ಕುರು ಸ್ವಾಹಾ" ಎಂದು ಮೇಧಾವೃದ್ಧಿಗಾಗಿ ಅಗ್ನಿಯನ್ನು ಪ್ರಾರ್ಥಿಸಬೇಕು ಯಜುರ್ವೇದದ ಕೆಳಗಣ ಮಂತ್ರದಿಂದ, ಶ್ರದ್ಧೆಯು ಸತ್ಯದ ತಳಹದಿಯೆಂಬ ತತ್ವವನ್ನು ನಾವು ಮನಗಾಣುತ್ತೇವೆ. "ವ್ರತೇನ ದೀಕ್ಷಾಮಾಪ್ನೋತಿ ದೀಕ್ಷಯಾಪ್ನೋತಿ ದಕ್ಷಿಣಾಂ। ದಕ್ಷಿಣಾ ಶ್ರದ್ಧಾಮಾಪ್ನೋತಿ ಶ್ರದ್ಧಯಾ ಸತ್ಯಮಾಪ್ಯತೇ" (ಯ, ೧೯-೩೦)

ವೇದವು ಅನಿರ್ವೇದವನ್ನು ಬೋಧಿಸುತ್ತದೆ. ಯಾಕೆಂದರೆ ವಾಲ್ಮೀಕಿ ವಚನದಂತೆ "ಅನಿರ್ವೇದವು ಸಂಪತ್ತಿಗೆ ಆಧಾರವು, ಅದು ಪರಮ ಸುಖವೂ ಆಗಿದೆ ; ವೇದವು ಕಾರ್ಪಣ್ಯವನ್ನೂ ಭೀರುತ್ವವನ್ನೂ ಎಂದೂ ಸಹಿಸುವುದಿಲ್ಲ. "ಅಯಂ ಲೋಕಃ ಪ್ರಿಯತಮೋ ದೇವಾನಾಮಪರಾಜಿತಃ". ಅಂತಹ ಅಪರಾಜಿತವಾದ ನಮ್ಮ ಮಾತೃಭೂಮಿಯು ಪ್ರಜೆಗಳ ದ್ವೇಷಾಸೂಯೆಗಳಿಂದುಂಟಾದ ಸಂಘಟನಾ ಲೋಪದಿಂದಾಗಿ ದುಷ್ಟರ, ಮ್ಲೇಚ್ಛರ ಆಕ್ರಮಣಕ್ಕೆ ಗುರಿಯಾಗಿ ಪರಾಜಿತವಾಯ್ತು. "ಉತ್ಯಾನಂತೇ ಪುರುಷ ಮಾವಪತ್ಥಾ ;" ಮೇಲಕ್ಕೆ ಹೋಗುತ್ತಿರು, ಎಂದೂ ಕೆಳಗೆ ಬೀಳಬೇಡ, ಎಂದು ಅರ್ಥವ ವೇದವು ಘೋಷಿಸುತ್ತದೆ. ಆದ್ದರಿಂದ ಬಲಶಾಲಿಯಾಗು, ಏಕೆಂದರೆ "ಬಲೇನ ವೈ ಪೃಥಿವೀ ತಿಷ್ಠತಿ, ಬಲೇನಾಂತರಿಕ್ಷಂ, ಬಲಮುಪಾಸ್ವ".

ಇದೇ ರೀತಿ ಸದಾಚಾರವನ್ನು ವೇದವು ಬೋಧಿಸುತ್ತದೆ. "ಪರಿ ಮಾಗ್ನೇ ದುಶ್ಚರಿತಾದ್ ಬಾಧಸ್ವಾ ಮಾ ಸುಚರಿತೇ ಭಜ। ಉದಾಯುಷಾ ಸ್ವಾಯುಷೋದಸ್ಥಾಮಮೃತಾ ಮನು॥" (ಯಜು. ೪-೨೮). ಇದೇ ಅರ್ಥವನ್ನು ಋಗ್ವೇದದ "ಮಾ ಪ್ರಗಾಮ.. ...(೧೦-೫೭-೧) ಎಂಬ ಮಂತ್ರವು ತಿಳುಹುತ್ತದೆ.

ರಾತ್ರಿಯಲ್ಲಿ ದುಃಸ್ವಪ್ನಾದಿಗಳುಂಟಾಗದಂತೆಯೂ ಶುಭ ಸಂಕಲ್ಪಗಳೇ ಉಂಟಾಗುವಂತೆಯೂ ಮಲಗುವ ಮೊದಲು "ತನ್ಮೇ ಮನಃ ಶಿವಸಂಕಲ್ಪಮಸ್ತು" ಎಂಬ (ಯಜುರ್ವೇದ ೩೪-೧ ರಿಂದ ೬) "ಸುಷಾರಥಿರಶ್ವಾನಿವ ಯನ್ಮನುಷ್ಯಾನ್ನೇನೀ ಯತೇಽಭೀಶುಭಿರ್ವಾಜಿನ ಇವ। ಹೃತ್ಪ್ರತಿಷ್ಠಂ ಯದಜಿರಂ ಜವಿಷ್ಠಂ ತನ್ಮೇ ಮನಃ ಶಿವಸಂಕಲ್ಪಮಸ್ತು॥" ಉತ್ತಮ ಸಾರಥಿಯು ಕುದುರೆಗಳನ್ನು ಕಡಿವಾಣಗಳ ಮೂಲಕ ಬೇಕಾದ ಸ್ಥಾನಕ್ಕೆ ಕೊಂಡು ಹೋಗುವಂತೆ, ಹೃದಯದಲ್ಲಿ ಸ್ಥಿರವಾಗಿರುವ, ಜರಾ ರಹಿತವಾದ, ಅತ್ಯಂತ ವೇಗಶಾಲಿಯಾದ ನನ್ನ ಮನಸ್ಸು ಉತ್ತಮ ಸಂಕಲ್ಪವುಳ್ಳದ್ದಾಗಲಿ ಹೀಗೆಯೇ ಪ್ರಾತಃಕಾಲದಲ್ಲಿಯೂ ಪ್ರಕೃತಿಯು ಶಾಂತವೂ ಸೌಮ್ಯವೂ ಆಗಿರುವಾಗಲೂ ಈ ಶಿವ ಸಂಕಲ್ಪ ಮಂತ್ರಗಳನ್ನು ಮನನ ಮಾಡುವುದರಿಂದ ಹಗಲಿನ ಸಮಯವೆಲ್ಲ ನೆಮ್ಮದಿಯ ಆಗರವಾಗುವುದು. ಇದಕ್ಕಾಗಿ ಹಿರಿಯರು ಬೆಳಗಿನ ಜಾವದಲ್ಲಿ ಎದ್ದು ದೇವರನ್ನು ಸ್ಮರಿಸುತ್ತಾ ಚಿರಜೀವಿಗಳ, ಮಹಾತ್ಮರ ಗುಣಗಳನ್ನು ನೆನೆಯುತ್ತಿದ್ದರು. ಅವರು "ಮಿತ್ರಸ್ಯಾಹಂ ಚಕ್ಷುಷಾ ಸರ್ವಾಣಿ ಭೂತಾನಿ ಸಮೀಕ್ಷೇ। ಮಿತ್ರಸ್ಯ ಚಕ್ಷುಷಾ ಸಮೀಕ್ಷಾಮಹೇ॥" ಎಲ್ಲರೂ ನನ್ನ ಮಿತ್ರರಾಗಲಿ. ನಾನು ಎಲ್ಲರನ್ನೂ ಮಿತ್ರರೆಂಬ ಭಾವನೆಯಿಂದ ನೋಡುವಂತಾಗಲಿ, ಎಂದು ಮುಂತಾಗಿ ಸದ್ಭಾವನೆಗಳನ್ನು ಮನಸ್ಸಿನಲ್ಲಿ ಉಂಟು ಮಾಡುತ್ತಿದ್ದರು. ಅವರು ಬೆಳಗ್ಗೆ ಅಗ್ನ್ಯುಪಾಸನೆಯನ್ನು ನೆರವೇರಿಸುತ್ತಾ ಭಾಗ್ಯ ಸೂಕ್ತವೆಂದು

ಪ್ರಸಿದ್ಧವಾದ ಮಂತ್ರಗಳನ್ನು ಪಠಿಸುತ್ತಾರೆ. ಇದನ್ನು ನಾವು ವೈದಿಕ ಸುಪ್ರಭಾತವೆಂದು ಹೆಸರಿಸಬಹುದು. (ಋ. VII–೪೧) "ನಾವು ಪ್ರಾತಃಕಾಲದಲ್ಲಿ ಅಗ್ನಿ, ಇಂದ್ರ, ಮಿತ್ರಾವರುಣರು, ಅಶ್ವಿನೀ ದೇವತೆಗಳು, ಭಗ, ಪೂಷ, ಬ್ರಹ್ಮಣಸ್ಪತಿ, ಸೋಮ, ಮತ್ತು ರುದ್ರ, ಇತರರನ್ನು ಆಹ್ವಾನಿಸುತ್ತೇವೆ. ನಮಗೆ ಒಳ್ಳೆಯ ಬುದ್ಧಿಯನ್ನು ಕೊಡು. ನಮಗೆ ಗವಾಶ್ವ ಸಮೃದ್ಧಿಯನ್ನು ಕೊಡು. ನಾವು ಉತ್ತಮ ಸಂತಾನ ಭಾಗ್ಯವನ್ನು ಹೊಂದುವಂತಾಗಲಿ ಎಲೈ ಭಗವಂತನಾದ ಪೂಷನ್, ನಾವು ಬೆಳಿಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ನಿನ್ನ ಧ್ಯಾನದಲ್ಲಿರುವಂತೆ ಮಾಡು. ಎಲ್ಲಾ ದೇವತೆಗಳೂ ನಮ್ಮ ಮೇಲೆ ಕರುಣೆಯನ್ನು ತೋರಲಿ. ಈ ಸಂಸಾರದಲ್ಲಿ ನೀನು ನಮಗೆ ಮಾರ್ಗದರ್ಶನವನ್ನು ಮಾಡು."

ಕೊನೆಯದಾಗಿ ಹೇಳುವುದಿದ್ದರೆ, ವೇದದ ಆದಿಯೂ ಮಧ್ಯವೂ ಅಂತವೂ ಶಾಂತಿಯಾಗಿ ಶಾಂತಿಗಾಗಿ, ಶಾಂತಿ ಸ್ಥಾಪನೆಗಾಗಿ, ರಾಷ್ಟ್ರದಲ್ಲಿ, ವಿಶ್ವದಲ್ಲಿ, ಮನುಷ್ಯರ ಹೃದಯದಲ್ಲಿ ಶಾಂತಿಯನ್ನು ನೆಲೆಗೊಳಿಸಿ "ತತ್ವಮಸಿ" ಎಂಬ ವೇದಾಂತ ವಾಕ್ಯದ ಅರ್ಥವನ್ನೇ ಶ್ರವಣಮಾಡಿ, ಮನನಮಾಡಿ, ನಿಧಿಧ್ಯಾಸನಮಾಡಿ ಸಹಜ ಸಮಾಧಿಯೆಂಬ ಅನಿರ್ವಚನೀಯ ಸ್ಥಿತಿಗೆ ಕೊಂಡೊಯ್ಯುವ ಉದ್ದೇಶಕ್ಕಾಗಿ ವೇದವಾಙ್ಮಯದಲ್ಲಿ ಸರ್ವತ್ರ ಪ್ರಚುರ ಪ್ರಭಾವವುಳ್ಳದ್ದಾಗಿದೆ. ಅಲಂಕಾರಿಕರು ಹೇಳುವಂತೆ ಎಲ್ಲಾ ರಸಗಳು ಶಾಂತರಸದ ಅಂಗಗಳೇ ಆಗಿ ತಂತಮ್ಮ ಕಾರ್ಯಗಳನ್ನೆಸಗುತ್ತವೆ. ಆದ್ದರಿಂದ ವೇದಪಾಠದ ಆರಂಭದಲ್ಲಿ 'ಶ್ರೀ ಗುರುಭ್ಯೋನಮಃ ಹರಿಃ ಓಂ' ಎಂದು ಹೇಳಿ "ಶಂ ನೋ ಮಿತ್ರಃ ಶಂ ವರುಣಃ..." ಎಂಬ ಶಾಂತಿಪಾಠವನ್ನು ಹಾಡುತ್ತಾರೆ. ಚಮಕಾಧ್ಯಾಯದಲ್ಲಿ "ಶಂಚಮೇ ಮಯಶ್ಚಮೇ" ಎಂದು ಶಾಂತಿಯನ್ನೇ ಎಲ್ಲರೂ ಬಯಸುತ್ತಾರೆ. ಪ್ರಪಂಚದಲ್ಲಿರುವ ಸಮಸ್ತ ಪ್ರಾಣಿಗಳೂ, ಔಷಧಿ ವನಸ್ಪತಿಗಳೂ, ಎಲ್ಲ ಪ್ರಜೆಗಳೂ ಶಾಂತಿಯಿಂದ ಕೂಡಿರಲೆಂದು ವೇದವು ಶಾಂತಿ ಸಂದೇಶವನ್ನು ಸಾರುತ್ತದೆ.

ನನ್ನೀ ಅತ್ಯಲ್ಪ ಕಾಣಿಕೆಯನ್ನು ವೇದಮಾತೆಯ ಅಡಿದಾವರೆಗಳಲ್ಲಿ ಭಕ್ತಿಪೂರ್ವಕವಾಗಿ ಸಮರ್ಪಿಸುತ್ತಿದ್ದೇನೆ. ಇದರಲ್ಲಿ ತುಂಬಾ ನ್ಯೂನಾತಿರಿಕ್ತಗಳಿರಬಹುದು. ಆದರೂ "ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ" ಎಂಬ ಶ್ರೀ ಶಂಕರಾಚಾರ್ಯರ ಮಾತಿನಲ್ಲಿ ವಿಶ್ವಾಸವಿಟ್ಟು ಇದನ್ನು ಬರೆಯಲು ಧೈರ್ಯಮಾಡಿದೆನು.

ನಮ್ಮ ಮಿತ್ರವರ್ಯರೂ, ವೇದಸಾಗರವನ್ನು ಮಂಥಾಚಲದಂತೆ ಆಲೋಚನೆಯಿಂದ ವಿಮರ್ಶಿಸಿ ಕ್ಲೇಶಭೂಯಿಷ್ಠವಾದ, ಅಮೃತ ಪ್ರಾಯವಾದ "ವೇದ ಸಂಸ್ಕೃತಿಯ ಪರಿಚಯ" ವೆಂಬ ಉದಾತ್ತ ಗ್ರಂಥ ರತ್ನವನ್ನು ಪ್ರಪಂಚದ ವಿದ್ವಾಂಸರಿಗೆ ಉಪಹಾರೀಕರಿಸಿದ ಶ್ರೀಮಾನ್ ಪ್ರೊ. ಕೆ. ಎಸ್. ನಾರಾಯಣಾಚಾರ್ಯರ ವೈದುಷ್ಯವನ್ನೂ ಅರ್ಥ ಪ್ರತಿಪಾದನ ಸಾಮರ್ಥ್ಯವನ್ನೂ ನೋಡಿ ತಲೆದೂಗದ, ಪಕ್ಷಪಾತ ರಹಿತನಾದ ಸಹೃದಯನಿರಲಾರನು. ಈ ಸ್ಮರಣ ಸಂಚಿಕೆಯು ಅವರ ಅಮೋಘವಾದ ವೇದವಾಙ್ಮಯ ಸೇವೆಯನ್ನು ಲೋಕಕ್ಕೆ ಶ್ರುತಪಡಿಸುವಂತಾಗಲಿ. ಶ್ರೀ ವೇದಮಾತೆಯು ಈ ಮಹನೀಯ ವಿಪಶ್ಚಿತ್ತಲ್ಲಜರಿಗೆ ಆಯುರಾರೋಗ್ಯಾದಿ ಸಮಸ್ತ ಸನ್ಮಂಗಳಗಳನ್ನು ಕರುಣಿಸಿ ಅವರಿಂದ ಇನ್ನೂ ಹೆಚ್ಚಿನ ವೇದ ಮಾತೆಯ ಸೇವೆಯು ನೆರವೇರಲಿ.

ಓಂ ತತ್ಸತ್

ಪ್ರೊ. ಎಂ. ಆರ್. ಭಟ್
(ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು
ಹಿಂದೂ ಕಾಲೇಜು, ದೆಹಲಿ ವಿಶ್ವವಿದ್ಯಾಲಯ
ನವ ದೆಹಲಿ)

ಶ್ರೀಃ

# ವೇದ ಮತ್ತು ಇತಿಹಾಸ

ಎಲ್ಲ ಮಾನವರ ಶಾಂತಿ ಸುಖಗಳಿಗೆ, ಅಭ್ಯುದಯ ಶ್ರೇಯಸ್ಸುಗಳಿಗೆ ಉತ್ತಮ ಸಾಧನವನ್ನು ತೋರಿಸುವ, ಪರಮ ರಹಸ್ಯ ಧರ್ಮಮರ್ಮವನ್ನು ತಿಳಿಸುವ, ಉತ್ತಮ ತಿಳುವಳಿಕೆ ನೀಡಿ ಉಪಕರಿಸುವ ವೇದಕ್ಕೆ ಸಾಟಿಯಾದುದು ಮತ್ತೊಂದಿಲ್ಲ. ಸರ್ವಕಾಲಕ್ಕೂ ಹೊಂದುವ, ಅಧಿಕಾರಾನುಗುಣವಾಗಿ ವೇದವು ಬೋಧಿಸಿರುವ ಮಾರ್ಮಿಕ ವಿಷಯಗಳನ್ನು ಸರಿಯಾಗಿ ಗ್ರಹಿಸಿ ಅದರಂತೆ ನಡೆದರೆ ಮಾನವನು ಸುಖಿಯಾಗಿ ಬಾಳುವನೆಂಬುವುದರಲ್ಲಿ ಸಂಶಯವಿಲ್ಲ. ತಾನು ಪ್ರತಿಪಾದಿಸುತ್ತಿರುವ, ಬೋಧಿಸುತ್ತಿರುವ ವಿಷಯಗಳಲ್ಲಿ ವಿಶ್ವಾಸವನ್ನು ಮೂಡಿಸಲು ಅನೇಕ ಉಪಾಖ್ಯಾನಗಳನ್ನು ಕಥೆಗಳನ್ನು ವೇದವು ಚಿತ್ರಿಸುತ್ತದೆ. ಹೆತ್ತ ತಾಯಿತಂದೆಗಳಿಗೆ ಮಕ್ಕಳಲ್ಲಿ ಇರುವ ವಾತ್ಸಲ್ಯಕ್ಕೆ ಸಾವಿರಪಟ್ಟು ಹೆಚ್ಚಿನ ವಾತ್ಸಲ್ಯವನ್ನು ಮಾನವರಲ್ಲಿ ತೋರುವ ವೇದಶಾಸ್ತ್ರ ಭಾರತೀಯರಿಗೆ ಅತ್ಯಂತ ಮಾನ್ಯವಾದ ಪ್ರಮಾಣ ಗ್ರಂಥವಾಗಿರುವುದು ಯುಕ್ತವಾಗಿದೆ. ವೇದ ಭಾಗದಲ್ಲಿರುವ ವಿಷಯಗಳನ್ನೇ ಸರಳವಾಗಿ ಸ್ಪಷ್ಟವಾಗಿ ನಿರೂಪಿಸಲು ವೇದಪ್ರೋಕ್ತ ವಿಷಯಗಳಲ್ಲಿ ಜನರಿಗೆ ಹೆಚ್ಚು ಆದರ ವಿಶ್ವಾಸಗಳನ್ನು ಮೂಡಿಸಲು ಇತಿಹಾಸ ಪುರಾಣಗಳು ಹೊರಟಿವೆ. ಪ್ರಮಾಣ ಮೂರ್ಧನ್ಯವಾದ ವೇದಗಳಲ್ಲಿ ನಿರೂಪಿತವಾಗಿರುವುದನ್ನೇ ಅಬಾಧಿತವಾಗಿ ವಿವರಿಸುವುದರಿಂದ, ವೇದಾನುಸಾರಿಯಾಗಿರುವುದರಿಂದ ಇತಿಹಾಸ ಪುರಾಣಗಳಿಗೂ ಪ್ರಾಮಾಣ್ಯ. ವೇದಗಳನ್ನೆಲ್ಲ ಸಮಗ್ರವಾಗಿ ಅಧ್ಯಯನ ಮಾಡಿ ವೇದಾರ್ಥಗಳನ್ನೆಲ್ಲ ಯಥಾರ್ಥವಾಗಿ ತಿಳಿಯುವುದು ಶ್ರಮಸಾಧ್ಯ. ಅನೇಕ ಸಂದರ್ಭಗಳಲ್ಲಿ ವಿಷಯ ಗ್ರಹಣದಲ್ಲಿ ಸಂಶಯಗಳು ತಲೆದೋರುತ್ತವೆ. ಕೆಲವು ವೇಳೆ ವಿಪರೀತ ಗ್ರಹಿಕೆಯೇ ಆಗಬಹುದು. ಅದಕ್ಕೆ ಅವಕಾಶವಿಲ್ಲದೆ ನಿಶ್ಚಿತಜ್ಞಾನ, ಯಥಾರ್ಥಜ್ಞಾನ ದೊರೆಯಲು, ಗಹನವಾಗಿರುವ, ಸಂಶಯಾಸ್ಪದವಾಗಿರುವ ವಿಚಾರಗಳಲ್ಲಿ ಇದು ಹೀಗೆ ಎಂದು ನಿರ್ಣಯ ಮಾಡಿಕೊಳ್ಳಲು ವ್ಯಾಖ್ಯಾನ ಅವಶ್ಯಕ. ಇಂಥ ಭವ್ಯ ವ್ಯಾಖ್ಯಾನ ಇತಿಹಾಸ ಪುರಾಣಗಳು. ಇತಿಹಾಸ ಪುರಾಣಗಳ ಸಹಾಯದಿಂದಲೇ ವೇದಾರ್ಥವನ್ನು ನಿರ್ಧರಿಸಬೇಕೆಂಬುದೇ ಬಲ್ಲವರ ಅಭಿಪ್ರಾಯ. 'ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್'. ಇತಿಹಾಸ ಪುರಾಣಗಳಿಂದ ವೇದವನ್ನು ಯಥಾವತ್ತಾಗಿ ಅರಿಯಬೇಕೆಂಬುದು ಈ ಮಾತಿನ ಸಾರ. ವೇದಕ್ಕೆ ಉಪಬೃಂಹಣ ಇತಿಹಾಸ ಪುರಾಣಗಳು. ಸಕಲ ವೇದಭಾಗವನ್ನರಿತ, ಯೋಗ ಮಹಿಮೆಯಿಂದ ಸಕಲ ವೇದಾರ್ಥಗಳನ್ನು ರಹಸ್ಯಾರ್ಥಗಳನ್ನು ಸ್ಪಷ್ಟವಾಗಿ ಕಂಡುಕೊಂಡಿರುವ ತತ್ತ್ವದರ್ಶಿಗಳ ಮಾತುಗಳಿಂದ ಅರ್ಥವನ್ನೂ ನಿರ್ಧರಿಸಿಕೊಳ್ಳುವುದನ್ನು ಉಪಬೃಂಹಣ ಮಾಡಿಕೊಳ್ಳುವುದು ಎಂಬುದರ ಅರ್ಥ. ಇತಿಹಾಸ ಪುರಾಣಗಳು ಉಪಬೃಂಹಣವಾಗಿವೆ ಎಂದರೆ ಸಕಲ ನಿಗೂಢ ವೇದಾರ್ಥಗಳನ್ನು ರಹಸ್ಯಾರ್ಥಗಳನ್ನು ವಿಶದಗೊಳಿಸುವ, ಭ್ರಮಾದಿಗಳಿಗೆ ಅವಕಾಶವಿಲ್ಲದಂತೆ ಯಥಾರ್ಥವಾದ ತಿಳುವಳಿಕೆಯನ್ನು ನೀಡುವ, ಯೋಗ ಮಹಿಮೆಯಿಂದ ತತ್ತ್ವಾರ್ಥಗಳನ್ನೆಲ್ಲ ಸಾಕ್ಷಾತ್ಕರಿಸಿರುವ ಪರಮ ಪ್ರಾಮಾಣಿಕರಾದ ಮಹನೀಯರು ರಚಿಸಿರುವ ಪ್ರಾಮಾಣಿಕ ವ್ಯಾಖ್ಯಾನ ಅಥವಾ ಭಾಷ್ಯ ಆಗಿದೆ ಎಂದು ಹೇಳಿದಂತಾಗಿದೆ. ಇದರಿಂದ ಇತಿಹಾಸ ಪುರಾಣಗಳು ಸ್ವಕಪೋಲ ಕಲ್ಪಿತ ವಿಷಯಗಳನ್ನು ಚಿತ್ರಿಸುತ್ತಿವೆ ಎಂಬ ತಪ್ಪುಕಲ್ಪನೆ ಸಲ್ಲದು. ಇತಿಹಾಸ ಪುರಾಣಗಳಲ್ಲಿ ವರ್ಣಿತವಾಗಿರುವ ಅನೇಕ ಕಥೆಗಳೂ ಸಹ ವೇದವಲ್ಲಿರುವಂಥವೇ. ಸಂದರ್ಭಕ್ಕೆ ಅಗತ್ಯವಾದಷ್ಟು ಕಥಾಭಾಗವನ್ನು ಮಾತ್ರ ವೇದವು ಮಿಂತವಾಗಿ ತಿಳಿಸಿರುತ್ತದೆ. ಇದನ್ನು ಪರಿಷ್ಕರಿಸಿ ಸುಂದರ

ವಾಗಿ ವಿಸ್ತಾರವಾಗಿ ಇನ್ನಷ್ಟು ರಸಮಯವಾಗಿ ಋಷಿಗಳು ಇತಿಹಾಸ ಪುರಾಣಗಳಲ್ಲಿ ವರ್ಣಿಸಿರುತ್ತಾರೆ. ಪ್ರಾಯಶಃ ಇತಿಹಾಸ ಪುರಾಣಗಳಲ್ಲಿ ದೊರೆಯುವ ಎಲ್ಲ ಉಪಖ್ಯಾನಗಳೂ ಮೂಲವೇದದಲ್ಲಿ ಸೂಚಿತ ವಾಗಿರಬಹುದು. ಅನಂತವಾಗಿರುವ ವೇದರಾಶಿಯಲ್ಲಿ ನಮಗೀಗ ದೊರೆತಿರುವ ಅಧ್ಯಯನ ಪರಂಪರೆ ಯಲ್ಲಿ ಪರಿಚಿತವಾಗಿರುವ ವೇದಭಾಗ ಅತ್ಯಲ್ಪ. ಆದ್ದರಿಂದ ಈಗ ಉಳಿದಿರುವ ವೇದಭಾಗವಲ್ಲಿ ಕಾಣದ ಮಾತ್ರದಿಂದ ನಿರ್ಮೂಲವಾದವು ಇತಿಹಾಸ ಪುರಾಣ ಕಥೆಗಳು ಎಂದು ನಿರ್ಣಯಿಸಬಾರದು.

ಈಗ ದೊರೆತಿರುವ ವೇದಭಾಗದಲ್ಲೇ, ಇತಿಹಾಸ ಪುರಾಣ ಪ್ರಸಿದ್ಧ ಕಥೆಗಳನೇಕವು ದೊರೆಯುತ್ತವೆ. ಮೂಲಭೂತ ವೇದದಲ್ಲಿ ದೊರೆಯುವ ಕೆಲವು ಪ್ರಸಿದ್ಧ ಉಪಾಖ್ಯಾನಗಳನ್ನು ಗಮನಿಸುವ.

ಪರಮಶಿವ ತ್ರಿಪುರದಾಹ ಮಾಡಿದ ಕಥೆ ಇತಿಹಾಸ ಪುರಾಣ ಪ್ರಸಿದ್ಧ. ತ್ರಿಪುರಾರಿ, ತ್ರಿಪುರಾಂತಕ ಮುಂತಾದ ಹೆಸರು ಶಿವನಿಗಿರುವುದೂ ಅವನು ನಡೆಸಿದ ತ್ರಿಪುರದಾಹ ಕಾರ್ಯದಿಂದ. ಈ ಕಥೆಯ ಮೂಲ ಆಖ್ಯಾಯಿಕೆ ಯಜುರ್ವೇದದಲ್ಲಿ ಸಂಗ್ರಹವಾಗಿ ಕಂಡು ಬರುತ್ತದೆ.

"ತೇಷಾಮಸುರಾಣಾಂ ತಿಸ್ರಃ ಪುರ ಆಸನ್ನಯಸ್ಮಯ್ಯವಮಾಥ ರಜತಾಥ ಹರಿಣೀ ತಾ ದೇವಾ ಜೇತುಂ ನಾಶಕ್ನುವನ್ ತಾ ಉಪಸದೈವಾಜಿಗೀಷನ್ ತಸ್ಮಾದಾಹುಃ ಯಶ್ಚೈವಂ ವೇದ ಯಶ್ಚ ನೋಪಸ–ದಾವೈ ಮಹಾಪುರಂ ಜಯಂತೀತಿ ತ ಇಷುಂ ಸಮಸ್ಕುರ್ವತಾಗ್ನಿಮನೀಕಂ ಸೋಮಂ ಶಲ್ಯಂ ವಿಷ್ಣುಂ ತೇಜನಂ ತೇऽಬ್ರುವನ್ ಕ ಇಮಾಮಸಿಷ್ಯತೀತಿ ರುದ್ರ ಇತ್ಯಬ್ರುವನ್ ರುದ್ರೋವೈ ಕ್ರೂರ ಸ್ಸೋऽಸ್ಯತ್ವಿತಿ ಸೋऽಬ್ರವೀದ್ವರಂ ವೃಣೈ ಅಹಮೇವ ಪಶೂನಾಮಧಿಪತಿರಸಾನೀತಿ ತಸ್ಮಾದ್ರುದ್ರಃ ಪಶೂನಾಮಧಿಪತಿಃ ತಾಂ ರುದ್ರೋವಾ ಸೃಜತ್ ಸ ತಿಸ್ರಃ ಪುರೋ ಭಿತ್ವೈಭ್ಯೋ ಲೋಕೇಭ್ಯೋ ಸುರಾನ್ ಪ್ರಾಣುದತ...॥"

ಇದರ ಸಾರಾರ್ಥ — ಅಸುರರಿಗೆ ಆವಾಸಸ್ಥಾನವಾಗಿ ಮೂರು ಪಟ್ಟಣಗಳಿದ್ದವು. ಆಕಾಶದಲ್ಲಿ ಹಂತಹಂತವಾಗಿ ಒಂದರ ಮೇಲೊಂದರಂತೆ ಇದ್ದ ಅವುಗಳಲ್ಲಿ ಕಬ್ಬಿಣದಿಂದ ನಿರ್ಮಿತವಾದ ಪಟ್ಟಣ ಕೆಳಗಿನದು. ಅದರ ಮೇಲೆ ಬೆಳ್ಳಿ ನಿರ್ಮಿತವಾದ ನಗರ. ಅದಕ್ಕೂ ಮೇಲೆ ಸುವರ್ಣ ನಿರ್ಮಿತ ಪಟ್ಟಣ. ಗಟ್ಟಿಮುಟ್ಟಾಗಿದ್ದ ಪಟ್ಟಣಗಳಲ್ಲಿ ಸೇರಿಕೊಂಡಿದ್ದರು ಅಸುರರು. ಆದ್ದರಿಂದ ಆ ಪಟ್ಟಣದಲ್ಲಿರುವ ಅಸುರರನ್ನು ಜಯಿಸಲು ಸಾಧ್ಯವಾಗಲಿಲ್ಲ ದೇವತೆಗಳಿಗೆ. ಆ ನಗರದ ಹತ್ತಿರವಿದ್ದು ಹೇಗಾದರೂ ಜಯಿಸಬೇಕೆಂಬ ಕುತೂಹಲ ದೇವತೆಗಳಿಗೆ. ದೃಢವಾದ ಆ ಪಟ್ಟಣಗಳನ್ನು ಧ್ವಂಸಮಾಡಲು ಸಮರ್ಥ ವಾದ ಬಾಣವೊಂದನ್ನು (ಆಯುಧವೊಂದನ್ನು) ನಿರ್ಮಿಸಿದರು. ಮುಖ ಭಾಗದಲ್ಲಿ ಅಗ್ನಿದೇವನನ್ನೂ ಹಿಂಭಾಗದಲ್ಲಿ ಸೋಮದೇವನನ್ನು, ಮೊನೆಯ ಭಾಗದಲ್ಲಿ ಮಹಾವಿಷ್ಣುವನ್ನೂ ಆವಾಹನೆ ಮಾಡಿ ಆಯುಧಕ್ಕೆ ವಿಶಿಷ್ಟ ಸಂಸ್ಕಾರವನ್ನೇ ಮಾಡಿದರು. ಸಂಸ್ಕಾರದ ಪ್ರಭಾವದಿಂದ ಅಪರಿಮಿತ ಶಕ್ತಿ ಹೊಂದಿದ ಆ ಆಯುಧವನ್ನು ಪಟ್ಟಣಗಳ ಮೇಲೆ ಎಸೆಯುವವರಾರು? ಎಂದು ವಿಚಾರ ಮಾಡಿದರು. ಕೊನೆಗೆ ಅದನ್ನು ಪ್ರಯೋಗಿಸಬಲ್ಲ ಸಮರ್ಥನು ತಮ್ಮಲ್ಲಿ ಯಾರೂ ಇಲ್ಲವೆಂದು ಭಾವಿಸಿ ರುದ್ರನೇ ಸಮರ್ಥ ನೆಂದು ಭಾವಿಸಿ ರುದ್ರನೇ ಸಮರ್ಥನೆಂದು ನಿರ್ಧರಿಸಿದರು. ಅವನನ್ನು ಪ್ರಯೋಗಿಸಲು ಕೇಳಿಕೊಂಡರು. ಸಮಸ್ತ ಪ್ರಾಣಿಗಳಿಗೂ ತನ್ನನ್ನೇ ಸದಾ ಸ್ವಾಮಿಯಾಗಿರಲು ಒಪ್ಪಿದರೆ ಆ ಕಾರ್ಯವನ್ನು ಮಾಡುವುದಾಗಿ ರುದ್ರನು ತಿಳಿಸಿದನು. ದೇವತೆಗಳು ಒಪ್ಪಿದರು. ಪ್ರೀತನಾದ ರುದ್ರನು ಬೇರಾರೂ ಪ್ರಯೋಗಿಸ ಲಾಗದ ಆ ಆಯುಧವನ್ನೆತ್ತಿ ನಗರದತ್ತ ಎಸೆದನು. ಆ ಆಯುಧವು ಮೂರು ಪಟ್ಟಣಗಳನ್ನು ಭೇದಿಸಿ ನಾಶಗೊಳಿಸಿ ಬಚ್ಚಿಟ್ಟುಕೊಂಡಿದ್ದ ಅಸುರರನ್ನು ಆಚೆಗೆ ಅಟ್ಟಿತು.

ಈ ಕಥೆಯ ಪೂರ್ವಾಪರ ವೃತ್ತಾಂತಗಳನ್ನೂ ಪೂರ್ವರೂಪವನ್ನೂ ತಪಃ ಪ್ರಭಾವದಿಂದ ಅತೀಂದ್ರಿಯ ವಿಷಯಗಳನ್ನು ಅರಿಯ ಕಾಣುವ, ಸಾಮರ್ಥ್ಯವುಳ್ಳ ಋಷಿಗಳು ಚೆನ್ನಾಗಿ ತಿಳಿದು ಇತಿಹಾಸ ಪುರಾಣ ಗಳಲ್ಲಿ ಹೃದಯಂಗಮವಾಗಿ ವರ್ಣಿಸಿರುತ್ತಾರೆ.

ಇದೇ ರೀತಿ ಇತಿಹಾಸ ಪುರಾಣ ಪ್ರಸಿದ್ಧವಾದ ಮತ್ತೊಂದು ಕಥೆ ಇಂದ್ರ ವಿಶ್ವರೂಪನಿಗೆ ಸಂಬಂಧಿಸಿ-ದುದು. ಇದರ ಮೂಲ ಆಖ್ಯಾಯಿಕೆ ವೇದದಲ್ಲಿ ಕಂಡು ಬರುವ ಕ್ರಮಃ

"ವಿಶ್ವರೂಪೋ ವೈ ತ್ವಾಷ್ಟ್ರಃ ಪುರೋಹಿತೋ ದೇವಾನಾಮಾಸೀತ್ ಸ್ವಸ್ರೀಯೋಽ ಸುರಾಣಾಂ ತಸ್ಯ ತ್ರೀಣಿ ಶೀರ್ಷಾಣ್ಯಾಸನ್ ಸೋಮಪಾನಂ ಸುರಾಪಾನಮನ್ನಾದನಂ ಸ ಪ್ರತ್ಯಕ್ಷಂ ದೇವೇಭ್ಯೋ ಭಾಗ ಮವದತ್ ಪರೋಕ್ಷಮಸುರೇಭ್ಯಃ ಸರ್ವಸ್ಮೈ ವೈ ಪ್ರತ್ಯಕ್ಷಂ ಭಾಗಂ ವದಂತಿ ಯಸ್ಮಾ ಏವ ಪರೋಕ್ಷಂ ವದಂತಿ ತಸ್ಯ ಭಾಗ ಉದಿತಸ್ತಸ್ಮಾದಿಂದ್ರೋಽಬಿಭೇ ದೀದೃಙ್ವೈ ರಾಷ್ಟ್ರಂ ವಿಪರ್ಯಾವರ್ತಯತೀತಿ ತಸ್ಯ ವಜ್ರಮಾದಾಯ ಶೀರ್ಷಾಣ್ಯಚ್ಛಿನತ್ ಯತ್ಸೋಮಪಾನಮಾಸೀತ್ಸ ಕಪಿಂಜಲೋಽ ಭವದ್ಯತ್ಸುರಾ ಪಾನಂ ಸ ಕಲವಿಂಕೋ ಯದನ್ನಾದನಂ ಸ ತಿತ್ತಿರಿಃ ,"

ಒಮ್ಮೆ ದೇವೇಂದ್ರನು ಆಸ್ಥಾನಕ್ಕೆ ದಯಮಾಡಿಸಿದ ಆಚಾರ್ಯ ಬೃಹಸ್ಪತಿಗಳನ್ನು ಯಥೋಚಿತ ವಾಗಿ ಸತ್ಕರಿಸದೆ ಉಪೇಕ್ಷಿಸಿದ ಪರಿಣಾಮವಾಗಿ ಅಸಮಾಧಾನಗೊಂಡ ಗುರುಗಳು ಕಣ್ಮರೆಯಾದರು. ಸರಿಯಾದ ಮಾರ್ಗದರ್ಶಿಗಳಿಲ್ಲದ ಇಂದ್ರನಿಗೆ ಅಸುರರಿಂದ ಬಾಧೆಯುಂಟಾಯಿತು. ತನ್ನ ಸ್ಥಾನ ಮತ್ತು ರಾಜ್ಯಕ್ಕೆ ಒದಗಿದ ವಿಪತ್ತಿನಿಂದ ಪೀಡಿತನಾದ ಇಂದ್ರನು ವಿಧಿಯಿಲ್ಲದೆ, ತಪೋನಿರತನಾಗಿದ್ದ, ಮೂರು ತಲೆಯುಳ್ಳ ಕಾರಣ ವಿಶ್ವರೂಪನೆಂದು ಪ್ರಸಿದ್ಧನಾಗಿದ್ದ, ತ್ವಷ್ಟೃವಿನ ಕುಮಾರನನ್ನೇ ಬಲಾತ್ಕಾರವಾಗಿ ಒಪ್ಪಿಸಿ ಪುರೋಹಿತನನ್ನಾಗಿ ಗುರುವನ್ನಾಗಿ ನಿಯಮಿಸಿಕೊಂಡನು. ದೇವ ಪುರೋಹಿತನಾಗಿ ವಿಶ್ವ-ರೂಪನು ನಾರಾಯಣ ಕವಚವನ್ನು ಇಂದ್ರನಿಗೆ ತೊಡಿಸಿ ರಕ್ಷೆ ಮಾಡಿದನು. ಇಂದ್ರನು ಒದಗಿದ ವಿಪತ್ತನ್ನು ಪರಿಹರಿಸಿಕೊಂಡು ಸುಖವಾಗಿ ರಾಜ್ಯಪಾಲನೆ ಮಾಡುವಂತಾಯಿತು, ಎಂಬ ಕಥೆಯು ಇತಿಹಾಸ ಪುರಾಣಗಳಲ್ಲಿರುವುದು ಸರ್ವವಿದಿತ. ಇದರ ಮೂಲ ಕಥೆಯು ವೇದದಲ್ಲಿ ಹೀಗಿದೆ—

ವಿಶ್ವರೂಪ ತ್ವಷ್ಟೃವಿನ ಪುತ್ರ. ಅಸುರ ಕುಲಕ್ಕೆ ಸೇರಿದವಳಲ್ಲಿ ಜನಿಸಿದುದರಿಂದ ಸಹೋದರಿಯ ಮಗನಾಗಿದ್ದನು. ಅವನು ದೇವತೆಗಳಿಗೆ ಪುರೋಹಿತನಾದನು. ಮೂರು ತಲೆಗಳಲ್ಲಿ (ಮುಖಗಳಲ್ಲಿ) ಒಂದಾದ ಸಾತ್ವಿಕ ಮುಖದಿಂದ ಸೋಮರಸಪಾನ ಮಾಡುತ್ತಿದ್ದನವನು. ರಾಜಸ ಮುಖದಿಂದ ಅನ್ನ ವನ್ನು ಭುಂಜಿಸುತ್ತಿದ್ದ ಅವನು ತಾಮಸ ಬಾಯಿಂದ ಸುರಾಪಾನ ಮಾಡುತ್ತಿದ್ದನು. ಕಾಲಕ್ರಮದಲ್ಲಿ ಅವನು ಎಲ್ಲರ ಮುಂದೆ ಪ್ರತ್ಯಕ್ಷವಾಗಿ ದೇವತೆಗಳಿಗೇ ಹವಿರ್ಭಾಗವು ಯುಕ್ತವೆಂದು ಸಾರುತ್ತಿದ್ದರೂ ಪರೋಕ್ಷವಾಗಿ ಗುಟ್ಟಾಗಿ ಅಸುರರಿಗೆ ಹವಿರ್ಭಾಗವನ್ನು ಕೊಡುವಂತೆ ಹೇಳುತ್ತಿದ್ದನು. ಋತ್ವಿಕ್ಕು ಗಳಿಗೆ ಪರೋಕ್ಷದ ಮಾತಿನಲ್ಲಿ ವಿಶ್ವಾಸವುಂಟಾಯಿತು. ಪರೋಕ್ಷವಾದ ನುಡಿಯೇ ಹೃದಯ ಪೂರ್ವಕ-ವಾದುದಲ್ಲವೆ ? ಇದು ಇಂದ್ರನಿಗೆ ತಿಳಿದು ಅಂಜಿಕೆ ಉಂಟಾಯಿತು. ಸ್ವಾಮಿ ದ್ರೋಹವನ್ನು ಮಾಡುವ ವಿಶ್ವರೂಪನು ರಾಷ್ಟ್ರವನ್ನು ಹಾಳು ಮಾಡುವನೆಂದು ಹೆದರಿದ ಇಂದ್ರನು ಸಮಯ ನೋಡಿ ಅವನ ಮೂರು ತಲೆಗಳನ್ನು ವಜ್ರಾಯುಧದಿಂದ ಕತ್ತರಿಸಿದನು. ತುಂಡಾದ ಸೋಮರಸಪಾನ ಮಾಡುತ್ತಿದ್ದ ತಲೆಯು ಕಪಿಂಜಲ ಪಕ್ಷಿಯಾಗಿ ಹಾರಿತು. ಸುರಾಪಾನದ ತಲೆಯು ಕಲವಿಂಕವಾಗಿಯೂ, ಅನ್ನವನ್ನು ಭುಂಜಿಸುತ್ತಿದ್ದ ತಲೆಯು ತಿತ್ತಿರಿ ಪಕ್ಷಿಯಾಗಿಯೂ ಹಾರಿಹೋಯಿತು.

ತ ಸ್ಯಾ ೦ ಜ ಲಿ ನಾ ಬ್ರಹ್ಮಹತ್ಯಾಮುಪಾಗೃಹ್ಣಾತ್ ತಾಂ ಸಂವತ್ಸರಮಂಬಿಭಃ ತಂ ಭೂತಾನಿ ಅಭ್ಯಕ್ರೋಶನ್ ಬ್ರಹ್ಮಹನ್ನಿತಿ.

ವಿಶ್ವರೂಪನ ವಧದಿಂದ ಒದಗಿದ ಬ್ರಹ್ಮಹತ್ಯಾ ದೋಷವನ್ನು ಇಂದ್ರನು ಅಂಜಲಿ ಮಾಡಿ ನಿರ್ಭಯನಾಗಿ ಸ್ವೀಕರಿಸಿದನು. ಒಂದು ಸಂವತ್ಸರ ಕಾಲ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದೆ ಹಾಗೆಯೇ ಬ್ರಹ್ಮ-ಹತ್ಯೆಯೊಂದಿಗೇ ಇದ್ದನು. ಎಲ್ಲರೂ "ಬ್ರಹ್ಮಹತ್ಯೆ ಮಾಡಿದವನೇ" ಎಂದು ಕೂಗುತ್ತಾ ಅವನಿಗೆ ಅಸಮಾಧಾನವಾಗುವಂತೆ ಮಾಡಿದರು. ಜನಾಪವಾದದಿಂದ ಅಂಜಿದ ಇಂದ್ರನು ಆ ದೋಷವನ್ನು ಇತರರಿಗೆ ಹಂಚಿಬಿಡಲು ಹವಣಿಸಿದನು.

"ಪೃಥಿವೀಮುಂಪಾಸೀದದಸ್ಯೈ ಬ್ರಹ್ಮಹತ್ಯಾಯೈ ತೃತೀಯಂ ಪ್ರತಿಗೃಹಾಣೇತಿ ಸಾಬ್ರವೀತ್ ವರಂ ವೃಣೈ ಖಾತಾತ್ಪರಾ ಭವಿಷ್ಯಂತೀ ಮನ್ಯೇ ತತೋ ಮಾಪರಾಭೂವಮಿತಿ, ಪುರಾ ತೇ ಸಂವತ್ಸರಾದಪಿ ರೋಹಾದಿತ್ಯ ಬ್ರವೀತ್ತಸ್ಮಾತ್ಪುರಾ ಸಂವತ್ಸರಾತ್ ಪೃಥಿವ್ಯೈ ಖಾತಮಪಿ ರೋಹತಿ ವಾರೇವೃತಂ ಹ್ಯಾಸ್ಯೈ ತೃತೀಯಂ ಬ್ರಹ್ಮಹತ್ಯಾಯೈ ಪ್ರತ್ಯಗೃಹ್ಣಾತ್ ತತ್ಸ್ವಕೃತಮಿರಿಣಮಭವತ್ ತಸ್ಮಾದಾಹಿತಾಗ್ನಿಃ ಶ್ರದ್ಧಾದೇವಃ ಸ್ವಕೃತ ಇರಿಣೇ ನಾವಸ್ಯೇತ್ ಬ್ರಹ್ಮಹತ್ಯಾಯೈ ಹ್ಯೇಷವರ್ಣಃ"

ಭೂಮಿ ದೇವತೆಯ ಬಳಿಗೆ ಬಂದು ಬ್ರಹ್ಮಹತ್ಯೆಯ ಮೂರನೆಯ ಒಂದು ಭಾಗವನ್ನು ಪರಿಗ್ರಹಿಸುವಂತೆ ಕೇಳಿಕೊಂಡನು. ಅದನ್ನು ಪಡೆಯಲು ಒಪ್ಪಿದ ಭೂಮಿಯು ಜನರು ಅಲ್ಲಲ್ಲೇ ಮಾಡುವ ಹಳ್ಳ-ಕೊಳ್ಳಗಳಿಂದ ತನಗೆ ಆಗುತ್ತಿರುವ ಪೀಡೆಯನ್ನು ಪರಿಹರಿಸಬೇಕೆಂದು ಪ್ರತಿಯಾಗಿ ವರ ಬೇಡಿದಳು. ಒಂದು ವರ್ಷದ ಅವಧಿಯಲ್ಲಿ ಹಳ್ಳಕೊಳ್ಳಗಳು ಮುಚ್ಚಿ ಹೋಗುವಂತೆ ಅವಳಿಗೆ ವರವನ್ನು ಕೊಟ್ಟ ಇಂದ್ರನ ಬ್ರಹ್ಮಹತ್ಯಾ ದೋಷದ ಮೂರನೆಯ ಒಂದು ಭಾಗವನ್ನು ಪೃಥಿವಿಯು ಸ್ವೀಕರಿಸಿದಳು. ಪಡೆದ ಆ ದೋಷವು ಭೂಮಿಯಲ್ಲಿ ಊಷರ ಪ್ರದೇಶವಾಯಿತು. ಊಷರ ಕ್ಷೇತ್ರವು ಬ್ರಹ್ಮಹತ್ಯಾದೋಷ ರೂಪವಾಗಿರುವುದರಿಂದಲೇ ಆಹಿತಾಗ್ನಿಯಾದವನು ಶ್ರದ್ಧಾವಂತನು ಎಂದೂ ನೆಲಸಬಾರದು, ಆ ಪ್ರದೇಶದಲ್ಲಿ ಯಜ್ಞಯಾಗಗಳನ್ನಂತೂ ಮಾಡಲೇಬಾರದು.

"ಸವನಸ್ಪತೀನುಂಪಾಸೀದದಸ್ಯೈ ಬ್ರಹ್ಮಹತ್ಯಾಯೈ ತೃತೀಯಂ ಪ್ರತಿಗೃಹ್ಣೀತೇತಿ ತೇಽಬ್ರುವನ್ ವರಂ ವೃಣಾಮಹೈ ವೃಕ್ಣಾತ್ಪರಾಭವಿಷ್ಯಂತೋ ಮನ್ಯಾಮಹೇ ತತೋ ಮಾಪರಾ ಭೂಮೇ ತ್ಯಾವಶನಾದ್ಭ್ಯೋ ಭೂಯಾಂಸ ಉತ್ತಿಷ್ಠಾ ನಿತ್ಯ ಬ್ರವೀತ್ ತಸ್ಮಾ ದಾವ್ರಶ್ಚನಾ ದ್ವೃಕ್ಷಾಣಾಂ ಭೂಯಾಂಸ ಉತ್ತಿಷ್ಠಂತಿ ವಾರೇವೃತಂ ಹ್ಯೇಷಾಂ ತೃತೀಯಂ ಬ್ರಹ್ಮಹತ್ಯಾಯೈ ಪ್ರತ್ಯಗೃ ಹ್ಣನ್ ಸನಿರ್ಯಾಸೋ ಭವತ್ ತಸ್ಮಾನ್ನಿರ್ಯಾಸಸ್ಯ ನಾಶ್ಯಂ ಬ್ರಹ್ಮಹತ್ಯಾಯೈ ಹ್ಯೇಷವರ್ಣೋಽಥೋ ಖಲು ಯ ಏವಂ ಲೋಹಿತೋ ಯೋವಾ ವೃಶ್ಚನಾನ್ನಿರ್ಯೇಷತಿ ತಸ್ಯನಾಶ್ಯಂ ಕಾಮಮನ್ಯಸ್ಯ,"

ಬಳಿಕ ಇಂದ್ರನು ವೃಕ್ಷದೇವತೆಗಳನ್ನು ಸಂಧಿಸಿ ಬ್ರಹ್ಮಹತ್ಯೆಯ ಮೂರನೆಯ ಒಂದು ಭಾಗವನ್ನೇ ಸ್ವೀಕರಿಸಬೇಕೆಂದು ಕೇಳಿಕೊಂಡನು. ಜನರು ಕೊಂಬೆಗಳನ್ನು ಕತ್ತರಿಸುವುದರಿಂದ ತಮ್ಮ ದೇಹದಲ್ಲಿ ಆಗುತ್ತಿರುವ ವಿಕಾರವನ್ನೇ ತಪ್ಪಿಸಬೇಕೆಂದು ವೃಕ್ಷದೇವತೆಗಳು ವರವನ್ನು ಕೇಳಿದರು. ಕತ್ತರಿಸಿದರೂ ಕತ್ತರಿಸಿದ ಭಾಗದಿಂದ ಅನೇಕವಾಗಿ ತುಂಬು ಚಿಗುರೊಡೆದು ಮೈತುಂಬಿಕೊಳ್ಳುವಂತೆ ವರವನ್ನು ಕೊಟ್ಟನು. ವರ ಪಡೆದ ಆ ವೃಕ್ಷಗಳು ಬ್ರಹ್ಮಹತ್ಯೆಯ ಮೂರನೆಯ ಒಂದು ಭಾಗವನ್ನು ಪಡೆದುಕೊಂಡವು. ಆ ಬ್ರಹ್ಮಹತ್ಯಾದೋಷವು ಮರಗಳಲ್ಲಿ ಘನೀಭೂತವಾದ ಕೆಂಪುರಸವಾಗಿ (ಗೋಂದೆಂದು

ಕರೆಯುವುದು ಇದನ್ನೇ) ಕತ್ತರಿಸಿದ ಭಾಗದಿಂದ ಹೊರಹೊಮ್ಮುತ್ತದೆ. ಆದ್ದರಿಂದಲೆ ಆಗೋಂದು-ರಸ ಅಭೋಜ್ಯ.

"ಸ ಸ್ತ್ರೀಷಂಸಾದಮುಪಾಸೀದದಸ್ಯೈ ಬ್ರಹ್ಮಹತ್ಯಾಯೈ ತೃತೀಯಂ ಪ್ರತಿಗೃಹ್ಣೀತೇತಿ ತಾ ಅಬ್ರುವನ್ ವರಂ ವೃಣಾಮಹಾ ಋತ್ವಿಯಾ ತ್ಪ್ರಜಾಂ ವಿಂದಾಮಹೈ ಕಾಮಮಾವಿ ಜನಿತೋಃ ಸಂಭವಾಮೇತಿ ತಸ್ಮಾದೃತ್ವಿಯಾ ಸ್ತ್ರಿಯಃ ಪ್ರಜಾಂ ವಿಂದಂತೇ ಕಾಮಮಾವಿ ಜನಿತೋಃ ಸಂಭವಂತಿ ವಾರೇವೃತಂ ಹ್ಯಾಸಾಂ ತೃತೀಯಂ ಬ್ರಹ್ಮಹತ್ಯಾಯೈ ಪ್ರತ್ಯಗೃಹ್ಣನ್ ಸಾ ಮಲವದ್ವಾಸಾ ಅಭವತ್ತಸ್ಮಾ ನ್ಮಲವದ್ವಾಸಸಾ ನ ಸಂವದೇತ ನ ಸಹಾಸೀತ ನಾಸ್ಯಾ ಅನ್ನಮಂದ್ಯಾ ದ್ಬ್ರಹ್ಮಹತ್ಯಾಯೈ ಹ್ಯೇಷಾವರ್ಣಮ್ ॥

ಪುನಃ ಇಂದ್ರನು ಸ್ತ್ರೀಯರ ಸಭೆಯನ್ನು ಸಂಧಿಸಿ ಬ್ರಹ್ಮಹತ್ಯೆಯ ಉಳಿದಿದ್ದ ಮೂರನೆಯ ಒಂದು ಭಾಗವನ್ನು ಪರಿಗ್ರಹಿಸುವಂತೆ ಕೇಳಿಕೊಂಡನು. ಆಗ ಆ ಸ್ತ್ರೀಯರು, ಪ್ರಥಮ ಸಂಭೋಗದಿಂದಲೇ ಗರ್ಭಧಾರಣೆಯಾದರೂ ಪ್ರಸವವಾಗುವವರೆಗೂ ಪುರುಷರೊಂದಿಗೆ ಸಂಭೋಗಕ್ಕೆ ಅವಕಾಶ ತಮಗಿರು ವಂತೆ ವರ ನೀಡಬೇಕೆಂದು ಬೇಡಿದರು. ಬ್ರಹ್ಮಹತ್ಯಾದೋಷವನ್ನು ಅವರಿಗೆ ಕೊಟ್ಟು ತಾನು ಶುದ್ಧ ನಾದ. ವರ ಪಡೆದ ಆ ಸ್ತ್ರೀಯರು ಪ್ರಸವವಾಗುವ ತನಕ ಪುರುಷ ಸಂಪರ್ಕಾವಕಾಶವನ್ನೇನೊ ಪಡೆದರು. ಆದರೆ ಬ್ರಹ್ಮಹತ್ಯಾದೋಷದ ಫಲವಾಗಿ ರಜಸ್ವಲೆಯರಾದರು. ರಜಸ್ಸು ಬ್ರಹ್ಮಹತ್ಯೆಯ ದೋಷ. ಆ ದೋಷವುಳ್ಳವರಾದ್ದರಿಂದ ಆ ಸಮಯದಲ್ಲಿ ಅವರು ಅಪರಿಶುದ್ಧರು, ಅಸ್ಪೃಶ್ಯರು ಆಗಿರುತ್ತಾರೆ. ಆದ್ದರಿಂದ ಅವರೊಂದಿಗೆ ಮಾತನಾಡಬಾರದು, ಅವರೊಂದಿಗೆ ಒಂದೆಡೆ ವಾಸಿಸಬಾರದು. ಅವರು ಮುಟ್ಟಿದ ಅನ್ನವನ್ನು ತಿನ್ನಬಾರದು. ಇತ್ಯಾದಿ.

ಇದೇ ರೀತಿ ಇತಿಹಾಸ ಪುರಾಣಗಳಲ್ಲಿ ಪ್ರಸಿದ್ಧವಾಗಿರುವ ವೃತ್ರಾಸುರನ ಕಥೆಯೂ ವೇದದಲ್ಲಿ ಉಪನಿಬದ್ಧವಾದುದೇ ವೇದದಲ್ಲಿರುವ ಮಾದರಿ ಹೀಗಿದೆ—

ತ್ವಷ್ಟಾ ಹತಪುತ್ರೋ ವೀಂದ್ರಂ ಸೋಮಮಾಹರತ್ ತಸ್ಮಿನ್ನಿಂದ್ರ ಉಪಹವಮೈಚ್ಛತ ತಂ ನೋಪಾಹ್ವಯತ ಪುತ್ರಂ ಮೇಽವಧೀರಿತಿ ಯಜ್ಞವೇಶಸಂ ಕೃತ್ವಾ ಪ್ರಾಸಹಾ ಸೋಮಮಪಿಬತ್ತಸ್ಯ ಯದತ್ಯಶಿಷ್ಯತ ತತ್ತ್ವಷ್ಟಾಹವನೀಯ ಮುಪ ಪ್ರಾವರ್ತಯತ್ ಸ್ವಾಹೇಂದ್ರಶತ್ರುರ್ವರ್ಧಸ್ವೇತಿ ಸ ಯಾವದೂರ್ಧ್ವಃ ಪರಾವಿದ್ಧ್ಯತಿ ತಾವತಿ ಸ್ವಯಮೇವ ವ್ಯ ರ ಮ ತ ಯದಿವಾ ತಾವತ್ಪ್ರವಣಮಾಸೀ ದ್ಯದಿವಾ ತಾವದಧ್ಯಗ್ನೇರಾಸೀತ್ಸ ಸಂಭವನ್ನಗ್ನೀ ಷೋಮಾವಭಿಸಮಭವತ್ ಸ ಇಷುಮಾತ್ರಮಿಷುಮಾತ್ರಂ ವಿಷ್ವಙ್ಙವರ್ಧತ ಸ ಇಮಾನ್ ಲೋಕಾನವೃಣೋ ದ್ಯ ದಿ ಮಾ ನ್ ಲೋಕಾನವೃಣೋತ್ತ ದ್ವೃತ್ರಸ್ಯ ವೃತ್ರತ್ವಂ, ತಸ್ಮಾದಿಂದ್ರೋಽಬಿಭೇತ್.

ತನ್ನ ಪುತ್ರ ವಿಶ್ವರೂಪನನ್ನು ಇಂದ್ರನು ಕೊಂದು ಹಾಕಿದ್ದರಿಂದ ತ್ವಷ್ಟಾವಿಗೆ ಕೋಪವುಂಟಾ ಯಿತು. ಇಂದ್ರನನ್ನೇ ಮುಗಿಸಿಬಿಡಬೇಕೆಂದು ಸಂಕಲ್ಪಿಸಿ ಇಂದ್ರನ ನಾಶವನ್ನು ಉದ್ದೇಶಿಸಿ ಸೋಮ ಯಾಗವನ್ನು ಮಾಡತೊಡಗಿದನು. ಆ ಯಾಗದಲ್ಲಿ ಇಂದ್ರನಿಗೆ ಆಹ್ವಾನವಿಲ್ಲ. ಇಂದ್ರನು ತನ್ನನ್ನು ಕರೆಯುವಂತೆ ಹೇಳಿದನು. ಆದರೆ ತ್ವಷ್ಟಾ ತನ್ನ ಮಗನನ್ನು ಸಂಹಾರ ಮಾಡಿದ್ದರಿಂದ ಅವನನ್ನು ಕರೆಯಲಿಲ್ಲ. ತಾನಿಲ್ಲದೆ ನಡೆಯುವ ಯಜ್ಞಕ್ಕೆ ವಿಘಾತ ಮಾಡಿ ಬಲಾತ್ಕಾರವಾಗಿ ಹಿಂಡಿಟ್ಟಿದ್ದ ಸೋಮ ರಸವನ್ನು ಕಿತ್ತುಕೊಂಡು ಇಂದ್ರನು ಕುಡಿದೇ ಬಿಟ್ಟ. ಅವನು ಕುಡಿದು ಸ್ವಲ್ಪ ಉಳಿದಿದ್ದ ಸೋಮ

ರಸವನ್ನೇ ಅಭಿಚಾರ ಕೃತ್ಯವನ್ನೆಸಗಲು ಆಹವನೀಯಾಗ್ನಿಯಲ್ಲಿ ಇಂದ್ರನನ್ನು ನಾಶಮಾಡಬಲ್ಲ ವೈರಿಯನ್ನು ಉತ್ಪತ್ತಿ ಮಾಡಬೇಕೆಂದು ಹೋಮದಲ್ಲಿ ಇಂದ್ರ ಶತ್ರುರ್ವರ್ಧಸ್ವ ಸ್ವಾಹಾ ಎಂಬ ಮಂತ್ರವನ್ನು ಉಚ್ಚರಿಸಿದನು. "ಎಲೈ ಅಗ್ನಿಯೇ ನಿನಗೀ ಹೋಮ ಮಾಡುತ್ತಿರುವೆನು. ಇಂದ್ರನನ್ನು ಸಂಹರಿಸುವ ಪುರುಷನಾಗಿ ಬೆಳೆಯುವವನಾಗು" ಎಂಬ ಅಭಿಪ್ರಾಯ ಅವನದಾಗಿತ್ತು. ಹೋಮದಿಂದ ಪ್ರೀತನಾದ ಅಗ್ನಿಯು ಇಂದ್ರನನ್ನು ಪರಾಭವಕ್ಕೆ ಗುರಿಮಾಡಿ ಕೊಲ್ಲುವೆನೆಂದು ಹೇಳುವ ಹಾಗೆ ಎತ್ತರವಾದ ಜ್ವಾಲೆಯಿಂದ ಬೆಳಗ ಹೊರಟವನು ಇದ್ದಕ್ಕಿದ್ದಂತೆ ಅಷ್ಟರಲ್ಲೇ ಅಡಗಿ ಹೋದನು. ಉನ್ನತ ಜ್ವಾಲೆಯಿಂದ ಯಜಮಾನನ ಕಾರ್ಯಸಿದ್ಧಿ ಸೂಚನೆ. ಜ್ವಾಲೆ ಅಡಗುವದರಿಂದ ಕಾರ್ಯಹಾನಿ ಸೂಚನೆ. ಆ ಅಗ್ನಿ ಮಹಾಪುರುಷ ರೂಪವಾಗಿ ಆದವನು ಹೋಮಾಧಾರಾಂಗಾಭಿಮಾನಿಯಾದ ಅಗ್ನಿದೇವನನ್ನೂ ಹೋಮ ಮಾಡಿದ ರಸಾಭಿಮಾನಿಯಾದ ಸೋಮದೇವನನ್ನೂ ತನ್ನ ಬಾಯೊಳಗೆ ಎರಡು ಹಲ್ಲುಗಳ ಸಾಲಿನ ನಡುವೆ ಕಚ್ಚಿಕೊಂಡು ಹೊರಬಂದನು. ಬಿಟ್ಟ ಬಾಣ ಹೋಗುವಷ್ಟು ದೂರದೇಶವನ್ನು ವ್ಯಾಪಿಸುವಷ್ಟು ಪ್ರಮಾಣದಲ್ಲಿ ಪ್ರತಿದಿನ ಬೆಳೆದು ಲೋಕವನ್ನೆಲ್ಲಾ ಮುಚ್ಚುವಷ್ಟು ಗಾತ್ರವನ್ನು ತಾಳಿದನು. ಲೋಕವನ್ನೆಲ್ಲ ಆವರಿಸುವಂತಹವನಾಗಿದ್ದರಿಂದ ಇವನಿಗೆ ವೃತ್ರ ಎಂಬ ಅನ್ವರ್ಥ ಹೆಸರು. ಈ ಭಯಾನಕ ಬೃಹದಾಕಾರದ ವೃತ್ರನನ್ನು ಕಂಡು ಇಂದ್ರನು ಅಂಜಿದನು.

ಸ ಪ್ರಜಾಪತಿಮುಪಾಧಾವತ್ ಶತ್ರುರ್ಮೇಽಜನೀತಿ ತಸ್ಮೈ ವಜ್ರಂ ಸಿಕ್ತ್ವಾ ಪ್ರಾಯಚ್ಛದೇತೇನ ಜಹೀತಿ ತೇನಾಭ್ಯಾಯತ ತಾವಬ್ರೂತಾಮಗ್ನೀಷೋಮೌ ಮಾಪ್ರಹಾರಾವಮಂತಃ ಸ್ವ ಇತಿ ಮಮ ವೈ ಯುವಂ ಸ್ಥ ಇತ್ಯಬ್ರವೀ ನ್ಮಾಮಭ್ಯೇತಮಿತಿ ತೌ ಭಾಗಧೇಯ ಮೈಚ್ಛೇತಾಂ ತಾಭ್ಯಾಮೇತಮಗ್ನಿ-ಷೋಮೀಯಮೇಕಾದಶಕಪಾಲಂ ಪೂರ್ಣಮಾಸೇ ಪ್ರಾಯಚ್ಛತ್ ತಾವಬ್ರೂತಾಮಭಿಸಂದಷ್ಟೌವೈಸ್ವೋ ನ ಶಕ್ನುವ ಐತುಮಿತಿ ಸ ಇಂದ್ರ ಆತ್ಮನಃ ಶೀತರೂರಾವಜನಯತ್ ತಚ್ಛೀತರೂರಯೋರ್ಜ ನ್ಮ ಯ ಏವಂ ಶೀತರೂರಯೋರ್ಜನ್ಮ ವೇದ ನೈನಂ ಶೀ ತ ರೂ ರೌ ಹತಸ್ತಾಭ್ಯಾಮೇನಮಂಭ್ಯನಯತ್ತಸ್ಮಾಜ್ಜಂಜಭ್ಯಮಾನಾದಗ್ನಿಷೋಮೌ ನಿರಕ್ರಾಮತಾಂ ಪ್ರಾಣಾಪಾನೌವಾ ಏನಂ ತದಜಹಿತಾಂ ಪ್ರಾಣೋ ವೈ ದಕ್ಷೋಽಪಾನಃ ಕ್ರತುಸ್ತಸ್ಮಾಜ್ಜಂಜಭ್ಯಮಾನೋ ಬ್ರೂಯಾನ್ಮಯಿ ದಕ್ಷಕ್ರತೂ ಇತಿ ಪ್ರಾಣಾಪಾನಾವೇವಾತ್ಮನ್ಧತ್ತೇ ಸರ್ವಮಾಯುರೇತಿ.

ನನಗೊಬ್ಬ ಶತ್ರು ಹುಟ್ಟಿಕೊಂಡಿದ್ದಾನೆ ಎಂದು ಇಂದ್ರನು ಪ್ರಜಾಪತಿಯನ್ನು ಮೊರೆಹೊಕ್ಕನು. ಪ್ರಜಾಪತಿಯು ವೃತ್ರನ ನಿಗ್ರಹಕ್ಕಾಗಿ ಅಭಿಮಂತ್ರಿತ ತೀರ್ಥದಿಂದ ವಜ್ರಾಯುಧವನ್ನು ಪ್ರೋಕ್ಷಿಸಿ ಕೊಟ್ಟು ಇದರಿಂದ ಅವನನ್ನು ಸಂಹರಿಸು ಎಂದು ಇಂದ್ರನಿಗೆ ಹೇಳಿದನು. ಆ ವಜ್ರಾಯುಧವನ್ನು ಹಿಡಿದು ಇಂದ್ರನು ವೃತ್ರನ ನಡೆ ನುಗ್ಗಿದನು. ಆಗ ಬಡಿಯಲು ಬಂದ ಇಂದ್ರನಿಗೆ ಅಗ್ನಿಸೋಮರು ವೃತ್ರನ ಬಾಯಲ್ಲಿ ನಾವಿಬ್ಬರೂ ಇದ್ದೇವೆ. ಆದ್ದರಿಂದ ಇವನನ್ನು ಬಡಿಯಬೇಡ ಎಂದು ಹೇಳಿದರು ನೀವಿಬ್ಬರೂ ನನ್ನವರು ನನ್ನ ಬಳಿಗೆ ಬಂದುಬಿಡಿರೆಂದು ಇಂದ್ರನು ಅವರಿಗಂದನು. ನಿನ್ನ ಬಳಿಗೆ ಬಂದರೆ ನಮಗೇನು ಭಾಗ್ಯ ಬರುವುದು ? ಎಂದು ಅವರು ಕೇಳಿದರು. ಪೌರ್ಣಮೆಯಲ್ಲಿ ಕೊಡುವ ಅಗ್ನಿಷೋಮೀಯ ಪುರೋಡಾಶವು ನಿಮ್ಮ ಭಾಗವಾಗಿರುವಂತೆ ಮಾಡುವೆನೆಂದ ಇಂದ್ರ. ಬರುವ ಇಚ್ಛೆಯಿದ್ದರೂ ಬರಲಾಗದ ಅಗ್ನಿ ಸೋಮರು ವೃತ್ರನ ಬಾಯಲ್ಲಿ ಹಲ್ಲುಗಳಿಂದ ಬಿಗಿಯಾಗಿ ಕಚ್ಚಿ ಹಿಡಿಯಲ್ಪಟ್ಟಿರುವೆವು ಹೊರಗೆಬರಲು ನಮ್ಮಿಂದಾಗದು ಎಂದರು. ಆಗ ಅವರು ಹೊರಟು ಬರುವ ಸೌಕರ್ಯಕ್ಕಾಗಿ ಶೀತಜ್ವರ-ತಾಪಗಳನ್ನು ಸೃಜಿಸಿದನು. ಆಗಲೇ ಶೀತಜ್ವರತಾಪಗಳ ಜನ್ಮವಾದದ್ದು. ಆಯುಧಗಳ ಕೆಲಸ ಮಾಡುವ ಶೀತಜ್ವರತಾಪಗಳನ್ನು ವೃತ್ರನ ಮೇಲೆ ಪ್ರಯೋಗಿಸಿದನು. ಶೀತಜ್ವರತಾಪಗಳಿಂದ ಬಾಯ್ತೆರೆದ ವೃತ್ರನ ಬಾಯಿಂದ ಅಗ್ನಿಸೋಮರು ಕೂಡಲೇ ಹೊರಗೆ ಬಂದರು. ಅಗ್ನಿಸೋಮರು ವೃತ್ರನನ್ನು ತ್ಯಜಿಸಿದಾಗ

ಪ್ರಾಣಾಪಾನಗಳೂ ಅವನನ್ನು ತ್ಯಜಿಸಿದವು. ಪ್ರಾಣಾಪಾನಗಳಿಗೆ ದಕ್ಷ-ಕ್ರತು ಎಂದು ಕ್ರಮವಾಗಿ ಹೆಸರು. ಕ್ರತುಕಾಲದಲ್ಲಿ ಬಾಯನ್ನು ಅಗಲಿಸುವ ಸೋಮಾರಿತನದಿಂದ ಆಕಳಿಕೆ, ವೈಮುರಿಯುತ್ತಲೇನಾದರೂ ಯಾಗ ಮಾಡುವ ಕರ್ತೃವಿಗೆ ಸಂಭವಿಸಿದರೆ 'ಮಯಿದಕ್ಷಕ್ರತೂ ಇತಿ' ಎಂಬ ಮಂತ್ರವನ್ನು ಪಠಿಸ-ಬೇಕೆಂಬ ವಿಧಿ. ಇದರಿಂದ ಯಜಮಾನನಿಗೆ ಅಪಮೃತ್ಯು ಪರಿಹಾರವಾಗಿ ದೀರ್ಘಾಯುಷ್ಯವುಂಟಾಗುತ್ತದೆ. ಈ ರೀತಿ ವೃತ್ರಾಸುರನ ಕಥೆಯು ವಿಸ್ತಾರವಾಗಿ ವೇದದಲ್ಲಿ ಉಪನಿಬದ್ಧವಾಗಿದೆ. ಹೀಗೆ ಇನ್ನೂ ಅನೇಕ ಕಥೆಗಳು ವೇದದಲ್ಲಿ ಕಂಡು ಬರುತ್ತವೆ. ದಿಕ್ಪ್ರದರ್ಶನ ಮಾತ್ರ ಇಲ್ಲಿ ಮಾಡಲಾಗಿದೆ.

ಪ್ರೊ. ಎನ್. ಟಿ. ಶ್ರೀನಿವಾಸಯ್ಯಂಗಾರ್ಯ
ನಿವೃತ್ತ ವ್ಯಾಕರಣ ಪ್ರಾಧ್ಯಾಪಕರು,
ಚಾಮರಾಜೇಂದ್ರ ಸಂಸ್ಕೃತ ಕಾಲೇಜು,
ಬೆಂಗಳೂರು

ಶ್ರೀಮತೇ ರಾಮಾನುಜಾಯ ನಮಃ

## || ಅಭಿನಂದನಂ ||

ಶ್ರೀ ವಾಧೂಲ ಕುಲಾಂಬುಧೀನ್ದುರಮಲಃ ಕಾನ್ನಾಕನಪಲ್ಲೀಸ್ಥಲಃ
ವಿದ್ವತ್ತಲ್ಲಜವಂಶಜಶ್ಚ ವಿದುಷಃ ಶ್ರೀವಾಸಸೂರೇಸ್ಸುತಃ ।
ರಂಗಾಂಬಾ ಸಹಿತಸ್ಯ ದೇಶಿಕಪದೋತ್ತಂಸಸ್ಯ, ವಿದ್ವದ್ವರಃ
ಶ್ರೀನಾರಾಯಣಸೂರಿರಾಂಗ್ಲವಚಸಾಂ ಪ್ರಾಧ್ಯಾಪಕೋ ರಾಜತೇ ॥೧॥

ಕರ್ಣಾಟಕ ಕಲಾಶಾಲಾ ಕಲ್ಯಾಣನಗರೇ ಚ ಯಾ ।
ತಸ್ಯಾಂ ಆಂಗ್ಲ ಸರಸ್ವತ್ಯಾಃ ಪ್ರಾಧ್ಯಾಪಕ ಪದಾಂಚಿತಃ ॥೨॥

ಗುರುದ್ವಯಾದ್ವೇದಮಧೀತ್ಯ ಸಮ್ಯಗ್ಭಾಷ್ಯೇಣ ಸಾಕಂ ಸುಗಭೀರಮರ್ಥಂ ।
ವಿಜ್ಞಾಯ, ವಿಜ್ಞಾನಿಭಿರಪ್ರಭೇದ್ಯಂ ಪ್ರಬೋಧಯಾಮಾಸ ಜನಾನ್, ಕೃಪಾತಃ ॥೩॥

ವೇದವಾಕ್ಯಶಕಲಾನಿ ಗೃಹೀತ್ವಾ ಸ್ವಾದು ಸುಷ್ಠು ವಿಶದೈಃ ಸ್ವವಚೋಭಿಃ ।
ವ್ಯಾಕೃತಿಂ ಬಹುಮುಖಾಂ ಚ ವಿಧಾಯ ವ್ಯಾಸತಾಮಭಿನವಾಮಭಿಧತ್ತೇ ॥೪॥

ವೇದಾನ್ತವಾಕ್ಯ ಸುನಿಗೂಢಮಹಾರ್ಥತತ್ತ್ವಂ
ಪೂರ್ವಾರ್ಥ ವೇದವಚಸಾಂ ಅಭಿಧೇಯಮೇವ ।
ವಿಷ್ಣೋಃ ಪರಾತ್ಪರತರಸ್ಯ್ವಿತರೇಽವರಾಶ್ಚೇ
ತ್ಯಾಖ್ಯಾತವಾನ್ ಸಕಲಸಂಶಯ ಸನ್ನಿವೃತ್ತ್ಯೈ ॥೫॥

ಶ್ರೀ ಭೂನೀಳಾಸ್ವಧಾಮೇಧಾ ಶ್ರದ್ಧಾವಾಗಾದಿ ಸೂಕ್ತಕೈಃ ।
ಶ್ರೀರೇವ ಹಿ ಸಮಾಖ್ಯಾತೇತ್ಯಾಖ್ಯದ್ವ್ಯಾಖ್ಯಾಮುಖೇನ ಯಃ ॥೬॥

(೧೯ ನೆಯ ಪುಟಕ್ಕೆ ಮುಂದುವರೆದುದು)

ಶ್ರೀಃ

# ಶುಭಾಶಂಸನ ಪದ್ಯಮಾಲಿಕಾ

ಕಾರ್ಕಾನಪಲ್ಲಿ ಮಹಿತೇ ನಗರೇ ಸ್ಥಿತಸ್ಯ
ವಾಧೂಲಗೋತ್ರಜಲಧೇಃ ವಿಧುವನ್ಮಹಿಮ್ನಃ
ಮಾದಾಸದೇಶಿಕಮಣೇಃ ದಯಿತಾಸುಶೀಲಾ
ಶ್ರೀರಂಗನಾಯಕಿ ವಧೂಃ ಪ್ರತಿಭಾತಿ ಸಾಧ್ವೀ ॥೧॥

ತಸ್ಯಾ ಗರ್ಭಸುಧಾಂಬುಧೇಃ ಸುಮಹಿತಃ ರಾಕಾಶಶಾಕಾಯಿತಃ
ಶ್ರೀ ನಾರಾಯಣಪೂಜ್ಯವರ್ಯವಿಬುಧಃ ಧಾರ್ವಾಡ ವಿದ್ಯಾಲಯೇ
ರಮ್ಯೇ ಚಾಂಗ್ಲವಿಭಾಗ ಸರ್ವ ವಿಷಯೇ ಸಂಪ್ರಾಪ್ಯ ಸರ್ವೋನ್ನತಿಂ
ಮುಖ್ಯಾಧ್ಯಾಪಕ ಭವ್ಯದಿವ್ಯ ಪದವೀಂ ಸಂಪ್ರಾಪ್ಯ ರಾರಾಜತೇ ॥೨॥

ಶ್ರೀ ನಾರಾಯಣ ದಿವ್ಯಕೀರ್ತಿಧವಳಚ್ಛಾಯೂಶ್ರಯಾದನ್ವಹಂ
ಧಾರ್ವಾಡ ಸ್ಥಿತ ವಿಶ್ವವೇದ ನಿಲಯಃ ಸಂಪೂರ್ಣಸಂತೋಷಕಃ
ಸರ್ವಾನಾಂಗ್ಲವಿಭಾಗಮಾರ್ಗನಿರತಾನ್ ಛಾತ್ರಾನ್ ಸುಸಂವರ್ಧಯನ್
ಸಾನಂದಂ ಪ್ರತಿಭಾತಿ ಪೂರ್ಣಫಲತಃ ಸಂಪ್ರಾಪ್ಯ ಸರ್ವೋಚ್ಚತಾಂ ॥೩॥

ನಾರಾಯಣಾರ್ಯಮುಖಶುಭ್ರ ಹಿಮಾದ್ರಿಕೂಟಾತ್
ವಾಣೀಮಯಸ್ತ್ರಿಪಥಗಾ ಸಲಿಲಪ್ರವಾಹಃ
ನಿರ್ಗತ್ಯ ರಕ್ಷತಿ ಸದಾ ಸಕಲಾಂಶ್ಚ ಶಿಷ್ಯಾನ್
ಸುಜ್ಞಾನತೀರ್ಥಮಮಲಂ ಪ್ರದದಾತಿ ನಿತ್ಯಂ ॥೪॥

ಅಯಂ ಮಹಾತ್ಮಾ ಧಿಷಣಾ ಪ್ರಭಾವಾತ್
ಮೈಸೂರು ಪುರ್ಯಾಮುಪಠತ್ ಸ್ವಬಾಲ್ಯೇ
ಶ್ರೀ ವಿಶ್ವವಿದ್ಯಾಲಯ ಸಂಸ್ಥಿತಾನ್ ತಾನ್
ಎಂಎಪ್ರಭೃತ್ಯಾನ್ಪದವೀಮವಾಪ ॥೫॥

ಶ್ರೀಮಾನಾಂಗ್ಲವಿಶಾರದೋಽಪಿ ಮಹಿಮಾಸಂಪಾದಿತೋಽಪಿ ಸ್ವಯಂ
ಪೂರ್ವಾಚಾರವಿಚಾರವೇಷವಿಷಯೇಷ್ವತ್ಯಂತಬದ್ಧಾದರಃ
ಪ್ರಾಚೀನಾಹ್ನಿಕ ಸಂಪ್ರದಾಯಸಹಿತಃ ಪದ್ಮಾಕ್ಷಮಾಲಾಂಕಿತಃ
ತ್ರಯ್ಯುಕ್ತೇಷ್ವಖಿಲೇಷು ಕರ್ಮಸು ಸದಾ ಭಕ್ತ್ಯಾ ಕರೋತ್ಯನ್ವಹಂ ॥೬॥

ಬೆಂಗ್ಳೂರಾಚಾರ್ಯಶಾಲಾಯಾಂ ಶಿಷ್ಯಾನಧ್ಯಾಪಯನ್ ಮುದಾ
ತತೋ ಧಾರ್ವಾಡ ಮಧ್ಯಸ್ಥ ವಿಶ್ವವಿದ್ಯಾಲಯಂ ಗತಃ ॥೭॥

ಶ್ರೀನಾರಾಯಣದಿವ್ಯಪಂಕಜಮುಖಾತ್ ನಿಷ್ಯಂದ ವಿದ್ಯಾರಸಂ
ನಾನಾದೇಶ ಸಮಸ್ತ ಭಕ್ತಮಧುಪಾಃ ಪಾಸ್ಯಂತಿ ಸಂತೋಷತಃ
ತೇಸರ್ವೇಽಪಿ ಮುದಾ ತದೇವ ವಿಷಯಂ ಸರ್ವೋಪಕಾರಾರ್ಥದಂ
ಸಮ್ಯಕ್ ಪುಸ್ತಕರೂಪತೋ ವ್ಯರಚಯಂತ್ಯಂತ ಸಂತೋಷತಃ ॥೮॥

ಶ್ರೀ ರಾಮಾಯಣ ಭಾರತಾದಿ ಮಹಿತಾನ್ ದಿವ್ಯಾನ್ ಪ್ರಬಂಧಾನ್ ಮುದಾ
ಕರ್ಣಾಟೇಷ್ವಖಿಲೇಷು ದೇಶಮಹಿತೇಷ್ವತ್ಯಂತ ಭಕ್ತ್ಯಾನ್ವಿತಃ
ಸರ್ವಾನ್ ಗೂಢತಮಾನ್ ಸಮಸ್ತ ವಿಷಯಾನ್ ಸಂಗ್ರಹ್ಯ ಗ್ರಂಥಾಂತರಾತ್
ವ್ಯಾಖ್ಯಾನಂ ಬಹುಧಾ ಕರೋತ್ಯನುದಿನಂ ನಾರಾಯಣಾರ್ಯಸ್ಸುಧೀಃ ॥೯॥

ವೇದಸಂಸ್ಕೃತಿಪರಿಚಯಾಭಿದ ಪಂಕ್ತಿಸಂಪುಟಸಂಚಯಾನ್
ಸರ್ವಲೋಕಹಿತಾರ್ಥಮೇವ ಹಿ ದಿವ್ಯಕನ್ನಡಭಾಷಯಾ
ನಾರಣಾರ್ಯಸುಧೀಂದ್ರಶೇಖರಮೌಳಿವರ್ಯ ಮಹಾಗುಣೀ
ಪಾತಿ ಸನ್ಮತಿಮಾರ್ಗಮೇವ ಹಿ ದರ್ಶಯಿಷ್ಯತಿ ಸರ್ವದಾ ॥೧೦॥

ಮಾವಾಸದೇಶಿಕಮಹಾಮಹಿಮಾಖ್ಯ ವೃಕ್ಷಂ
ಶ್ರೀರಂಗನಾಯಕಿಲತಾ ಸಮುಪಾಶ್ರಿತಾನಾಂ
ನಾರಾಯಣಾಖ್ಯ ಸುಫಲಂ ಸಮವಾಪ್ಯ ದಿವ್ಯಂ
ಲೋಕೋಪಕಾರಕಧಿಯಾ ಪ್ರದದೌ ಶುಭಾನ್ನಃ ॥೧೧॥

ವಾಧೂಲ ವಂಶಜೋ ವಿದ್ವಾನ್ ವಕ್ತಾ ವಾಗ್ಮೀ ವಿಚಕ್ಷಣಃ
ನಾರಾಯಣಾರ್ಯೋ ನೃಮಣಿಃ ನೀತಿಜ್ಞೋ ನ್ಯಾಯಸಂಮತಃ ॥೧೨॥

ಪಂಚಾಶತ್ ಗ್ರಂಥಕರ್ತಾನ್ ಬಹುಗುಣಮಹಿತಃ ವೇದಸಂಸ್ಕೃತ್ಯನಂತಾ
ಗ್ರಂಥಾನ್ ರಾಮಾಯಣಾದೀನ್ ಅನಿತರ ಸುಲಭಾನ್ ಭಾರತಾದೀ ಸಮಸ್ತಾನ್ ।
ಸರ್ವಾನಾಲೋಡ್ಯ ದಿವ್ಯಾನ್ ವಿತರತಿ ಕೃಪಯಾ ವೇದವೇದಾಂತಸಾರಂ
ಶ್ರೀಮಾನ್ ನಾರಾಯಣಾರ್ಯೋ ಜಗತಿ ಬಹುತರಂ ಸರ್ವಲೋಕೋಪಕಾರಂ
॥೧೩॥

ಶ್ರೀರಾಮಪಾದಪ್ರಣಯಿನ್ಯಭಿಖ್ಯಾಂ ವ್ಯಾಖ್ಯಾಂ ವಿಶೇಷಾರ್ಥಯುತಾಂ ಸುಬೋಧಾಂ
ವಾಲ್ಮೀಕಿರಾಮಾಯಣದಿವ್ಯಕಾವ್ಯಸ್ಯಾದ್ಯಾಂ ಕಥಾಂ ನಿರ್ಮಿಮಿರೇ ಮಹಾತ್ಮಾ ॥೧೪॥

ಶ್ರೀಮದ್ಭಾಗವತಸ್ಯ ಸಾರಮಹಿತಾಂ ಶ್ರೀಗೋಪಿಕಾಗೀತಿಕಾಂ
ಸವ್ಯಾಖ್ಯಾಂ ಮಹತೀಂ ಕಥಾಂ ವ್ಯರಚಯನ್ ಸರ್ವಾರ್ಥಸಂದಾಯಿನೀಂ
ಶ್ರೀ ವ್ಯಾಸಸ್ಮೃತಿ ಭೀಷ್ಮಸೂಕ್ತಿಮಹಿತಾನ್ ಗ್ರಂಥಾನ್ವಿರಚ್ಯಾದರಾತ್
ಶ್ರೀ ಕರ್ನಾಟಭಾಷಯಾ ಸುಮಹಿತಾಂ ವ್ಯಾಖ್ಯಾಂ ಕರೋತ್ಯನ್ವಹಂ ॥೧೫॥

ತಿರುಪ್ಪಾವೈ ಮಹಾಸೂಕ್ತಿಂ ಶತಾದಪ್ಯಧಿಕಂಮುಂದಾ
ಕರ್ಣಾಟಭಾಷಾವ್ಯಾಖ್ಯಾನಂ ಅಕರೋತ್ಸರ್ವತಸ್ಸದಾ ॥೧೬॥

ವದಾನ್ಯೋ ವಿನಯೀ ವಿದ್ವಾನ್ ವ್ಯಾಖ್ಯಾತಾ ವಕ್ತೃವಲ್ಲಭಃ
ವಿಚಕ್ಷಣೋ ವಿಧೇಯಶ್ಚ ನಾರಣಾರ್ಯಬಂಧಾಗ್ರಣೀಃ । ॥೧೭॥

ಶ್ರೀ ಮಂದ್ಯಾಜಂಪವೇದವಿದ್ಗುಣಮಣಿಃ ನಾರಾಯಣಾರ್ಯೋ ಬುಧಃ
ಸರ್ವಾಸೂಪನಿಷತ್ಸು ಪಂಡಿತವರ ಶ್ಯಾಂಗ್ಲೇಯ ಭಾಷಾಗ್ರಣೀಃ
ಶ್ರೀ ಮಂದ್ರಾವಿಡಸಾರ ಸಾಗರ ತಿರುಪ್ಪಾವ್ಯಾದಿ ಸಾರಪ್ರದಃ
ಶ್ರೀ ರಾಮಾಯಣ ಭಾರತಾದಿ ವಿಷಯ ವ್ಯಾಖ್ಯಾನವಿದ್ವನ್ಮಣಿಃ ॥೧೮॥

ಕಲ್ಯಾಣಂ ವಿತನೋತು ಸರ್ವಜಗತಾಂ ಲಕ್ಷ್ಮೀನೃಸಿಂಹಪ್ರಭುಃ
ಶ್ರೀ ನಾರಾಯಣಸರ್ವವೇದ ವಿದುಷೇ ಶಾಂತಾತ್ಮನೇ ಧೀಮತೇ
ಸದ್ವಿದ್ಯಾಂ ಧವಳಾಂಚಕೀರ್ತಿಮತುಲಾಂ ದತ್ವಾ ಸ್ಥಿರಾಂ ಸತ್ಕಲಾಂ
ದೇವೇಶಃ ಕರುಣಾರ್ಣವೋ ನರಹರಿಃ ದೀರ್ಘಾಯುರಾರೋಗ್ಯತಾಂ ॥೧೯॥

ಆಯುರಾರೋಗ್ಯ ಭಾಗ್ಯಾನಿ ದದಾತು ಜಗದೀಶ್ವರಃ
ನಾರಾಯಣಾರ್ಯವಿದುಷೇ ಸರ್ವೇಶಸ್ಸರ್ವಪಾಲಕಃ ॥೨೦॥

ಇತಿ ವಿದ್ವಾನ್ ಚಕ್ರವರ್ತಿ ಹೆಡತಲೆ ಗೋಪಾಲಾಚಾರ್ಯಃ
ನಿವೃತ್ತ ಸಂಸ್ಕೃತಾಧ್ಯಾಪಕರು
ಚಾಮರಾಜನಗರ



೧೭ ನೇ ಪುಟದಿಂದ ಬಂದುದು

ವಾಲ್ಮೀಕಿವ್ಯಾಸವಾಚಾಮನುಪಮರಚನಾವೈಖರೀ ವಿಶ್ರುತಾನಾಂ
ಮಾರ್ಗಸ್ತ್ರುಗ್ವ್ಯಾಖ್ಯಯಾ ಯಃ ಪ್ರತಿಪದಮಜಹತ್ ಸ್ವಾರ್ಥಯೋಚಾಂತರಾರ್ಥಾ ।
ವ್ಯಾವೃಣ್ವನ್ ನೇತ್ರಜಾತಂ ಸಕಲಜನಗತಂ ಮೀಲಿತಂ ತ್ವಂಧಕಾರೇ
ಪ್ರೋನ್ಮೀಲ್ಯ ಜ್ಞಾನಚಕ್ಷುಃ ಪ್ರದಿಶತಿ ಸುಹಿತಂ ನಾರಣಾರ್ಯಸ್ಸಜೀಯಾತ್ ॥೭॥

ಇತಿ ಶ್ರೀ ಬಾಲಧನ್ವೀ ಜಗ್ಗು ಸುದರ್ಶನಾಚಾರ್ಯಃ
ಸಾಹಿತ್ಯ ವೇದಾಂತ ವಿದ್ವಾನ್
ವಿಶ್ರಾಂತ ವಿಶಿಷ್ಟಾದ್ವೈತ ವೇದಾಂತ ಪ್ರಾಧ್ಯಾಪಕಃ
ಬೆಂಗಳೂರು

# ವೇದಗಳು ಮತ್ತು ಷೋಡಶ ಸಂಸ್ಕಾರಗಳು

ವೇದವೆಂದರೇನು ? ಅದು ಯಾವುದು ? ಅದರ ಲಕ್ಷಣವೇನು ? ಅದರಲ್ಲಿ ಹೇಳುವ ವಿಷಯ-ವಾವುದು ? ಸಂಬಂಧವೇನು ? ಅದನ್ನು ಅರಿಯುವುದರಿಂದ ಆಗುವ ಪ್ರಯೋಜನವೇನು ? ಅದಕ್ಕೆ ಅಧಿಕಾರಿಗಳಾರು ? ಅಂದರೆ ಅದನ್ನು ಕಲಿಯತಕ್ಕವರಾರು ? ಅದು ಹೇಗೆ ಪ್ರಮಾಣ ಗ್ರಂಥ ? ಈ ವಿಷಯಗಳನ್ನು ಮೊದಲು ಅರಿಯೋಣ.

ನಮಗೆ ಇಷ್ಟವಾದುದನ್ನು ಪಡೆಯುವುದಕ್ಕೂ ಅನಿಷ್ಟವಾದುದನ್ನು, ಅಂದರೆ ಬೇಡದೆ ಇರುವುದನ್ನು, ಬಿಡುವುದಕ್ಕೂ ಅಲೌಕಿಕವಾದ ಉಪಾಯವನ್ನು ಯಾವ ಗ್ರಂಥವು ತಿಳಿಸುತ್ತದೋ ಅದೇ ವೇದ. ಅಲೌಕಿಕವೆಂದರೆ ಲೋಕದಲ್ಲಿ ನಾವು ಕಾಣದೇ ಇರುವುದು. ಅಥವಾ ನಾವು ಊಹಿಸದೇ ಇರುವುದು ಅಂತಹ ಸಾಧನವನ್ನು ಬೋಧಿಸುವ ಗ್ರಂಥ ವೇದ.

ನಮ್ಮಿಂದ ಅನುಭವಿಸಲ್ಪಡುವ ಹೂವು, ಗಂಧ, ಹೆಂಗಸು ಮುಂತಾದವುಗಳಿಗೆ ಇಷ್ಟವಾದುದನ್ನು ಹೊಂದಲು ಕಾರಣವಾಗುವಿಕೆಯೂ, ಔಷಧಿಯನ್ನು ಸೇವನೆ ಮಾಡುವುದೇ ಮುಂತಾದವುಗಳಿಗೆ ಅನಿಷ್ಟವನ್ನು ಹೋಗಲಾಡಿಸುವಿಕೆಯೂ ಪ್ರತ್ಯಕ್ಷವಾಗಿಯೇ ಕಾಣುತ್ತಿದ್ದೇವೆ.

ತನ್ನಿಂದ ಅನುಭವಿಸಲ್ಪಡುವ ಹಾಗೆಯೇ ಬೇರೆ ಪುರುಷನಿಂದ ಅನುಭವಿಸಲ್ಪಡುವುದೂ ಕೂಡ ಅನುಮಾನ ಪ್ರಮಾಣದಿಂದ ಅರಿಯಲ್ಪಡುತ್ತದೆ. ಹಾಗೆಯೇ ಮುಂದಿನ ಜನ್ಮದಲ್ಲಿ ಉಂಟಾಗುವ ಸುಖಾದಿಗಳೂ ಅನುಮಾನ ಪ್ರಮಾಣದಿಂದ ಅರಿಯಲ್ಪಡುತ್ತವೆ ಎಂದರೆ ಅದು ಸರಿಯಲ್ಲ. ಆ ವಿಶೇಷವು ಅದರಿಂದ ಅರಿಯಲಾಗದು. ಜ್ಯೋತಿಷ್ಟೋಮಾದಿ ಯಾಗಗಳು ನಮ್ಮ ಇಷ್ಟವನ್ನು ಪಡೆಯಲು ಸಾಧನಗಳು. ಕಲಂಜವನ್ನು, ಗಾಂಜಾವನ್ನು, ತಿನ್ನುವುದನ್ನು ಬಿಡಬೇಕು. ಅದನ್ನು ತಿನ್ನುವುದು ಕೇಡು, ಹೀಗೆಂಬುದು ಅನಿಷ್ಟ ಪರಿಹಾರದ ಕಾರಣ, ಈ ವಿಷಯವನ್ನು ವೇದವನ್ನು ಬಿಟ್ಟು ಸಾವಿರಾರು ಅನುಮಾನಗಳಿಂದಲೂ ತಾರ್ಕಿಕ ಶಿರೋಮಣಿಗಳಿಂದ ಊಹಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ 'ಅಲೌಕಿಕವಾದ ಉಪಾಯವನ್ನು ಬೋಧಿಸುವುದು ವೇದ' ಎಂಬ ಲಕ್ಷಣಕ್ಕೆ ಅತಿವ್ಯಾಪ್ತಿ ದೋಷವಿಲ್ಲ. ಮತ್ತಾವುದಕ್ಕೂ ಈ ಲಕ್ಷಣ ಹೊಂದುವುದಿಲ್ಲ. ಆದುದರಿಂದಲೇ ಹೀಗೆ ಹೇಳಲ್ಪಟ್ಟಿದೆ.

ಪ್ರತ್ಯಕ್ಷೇಣಾನುಮಿತ್ಯಾ ವಾ ಯಸ್ತೂಪಾಯೋ ನ ಬುಧ್ಯತೇ ।
ಏನಂ ವಿದನ್ತಿ ವೇದೇನ ತಸ್ಮಾದ್ವೇದಸ್ಯ ವೇದತಾ ॥

ಪ್ರತ್ಯಕ್ಷ ಮತ್ತು ಅನುಮಾನ ಈ ಪ್ರಮಾಣಗಳಿಂದ ಯಾವ ಉಪಾಯವನ್ನು ಅರಿಯಲಾಗದೋ ಅದನ್ನು ವೇದದಿಂದ ಅರಿಯುತ್ತಾರೆ. ಆದುದರಿಂದ ವೇದಕ್ಕೆ ವೇದತ್ವ ಉಂಟಾಯಿತು. ವಿದ-ಜ್ಞಾನೇಧಾತುವಿನಿಂದ ನಿಷ್ಪನ್ನವಾದದ್ದು ವೇದಶಬ್ದ.

ಆ ಉಪಾಯವೇ ವೇದದ ವಿಷಯ, ಅದನ್ನು ಅರಿಯುವುದೇ ಪ್ರಯೋಜನ. ಅದನ್ನು ಅರಿಯ-ಬೇಕೆನ್ನುವನೇ ಅಧಿಕಾರಿಯು. ಅವನೊಡನೆ ಉಪಕಾರ್ಯ ಉಪಕಾರಕ ಭಾವವೇ ಸಂಬಂಧ. ಅಧಿಕಾರಿಯು

ಆ ಉಪಾಯುವನ್ನು ಅರಿತು ಅದರಿಂದ ಪ್ರಯೋಜನವನ್ನೂ ಪಡೆಯುವುದರಿಂದ ಉಪಕಾರ್ಯನಾದ, ಉಪಕರಿಸಲು ತಕ್ಕವನಾದ. ವೇದವು ಉಪಕಾರಕವಾಯಿತು.

ಹಾಗಾದರೆ ಸ್ತ್ರೀಗಳು ಶೂದ್ರಾದಿಗಳು ಎಲ್ಲರೂ ಅಧಿಕಾರಿಗಳೇ ಆದರು. ಇಷ್ಟವು ನನಗುಂಟಾಗಲಿ ; ಅನಿಷ್ಟವೂ ಉಂಟಾಗದಿರಲಿ ಎಂಬ ಭಯವು ಎಲ್ಲರಿಗೂ ಸಮನಾಗಿಯೇ ಇದೆ, ಎಂದರೆ ಅದು ಸರಿಯಲ್ಲ. ಬಯಕೆ ಇರಬಹುದು, ಆದರೆ ಅವರಿಗೆ ಅಧಿಕಾರವನ್ನು ನಿಷೇಧಿಸಿದೆ ಶಾಸ್ತ್ರ. ಉಪನಯನ ಸಂಸ್ಕಾರ–ವಿರುವವನಿಗೆ ಮಾತ್ರ ವೇದಾಧಿಕಾರ. ಅನುಪನೀತರಾದ ಅವರು ಅಧ್ಯಯನ ಮಾಡಿದರೆ ಅವರಿಗೆ ಅನಿಷ್ಟ ವುಂಟಾಗುತ್ತದೆ ಎಂದು ಹೇಳುತ್ತದೆ.

ಹಾಗಾದರೆ ಅವರು ಉಪಾಯುವನ್ನು ಅರಿಯುವ ಬಗೆ ಹೇಗೆಂದರೆ ಪುರಾಣಾದಿಗಳಿಂದ ಎಂದು ಹೇಳೋಣ.

ಸ್ತ್ರೀ ಶೂದ್ರದ್ವಿಜಬನ್ಧೂನಾಂ ತ್ರಯೀ ನ ಶ್ರುತಿಗೋಚರಾ ।
ಇತಿ ಭಾರತ ಮಾಖ್ಯಾನಂ ಕೃಪಯಾಮುನಿನಾಕೃತಮ್ ॥

ಹೆಂಗಸರು, ಅಂತ್ಯಜರು, ದ್ವಿಜಬಂಧುಗಳು (ತಾನು ದ್ವಿಜನಾಗದೆ ದ್ವಿಜರನ್ನು ಬಂಧು ಎಂದು ಹೇಳಿ ಕೊಳ್ಳುವವರು) ಇವರಿಗೆ ವೇದವು ಕಿವಿಯ ವಿಷಯುವಾಗುವುದಲ್ಲ ; ಅಂದರೆ ಕಿವಿಯಿಂದ ಕೇಳಿ ಅಭ್ಯಾಸ ಮಾಡತಕ್ಕದ್ದಲ್ಲ. ಆದರೆ ಇವರು ಉಪಾಯುವನ್ನು ಅರಿತು ಉದ್ಧಾರವಾಗುವ ಬಗೆ ಹೇಗೆಂದು ಯೋಚಿಸಿ ದಯೆಯಿಂದ ವ್ಯಾಸ ಋಷಿಗಳು ಭಾರತವನ್ನು ರಚಿಸಿ ಅದರಲ್ಲಿ ಉಪಾಯುವನ್ನು ಪ್ರತಿಪಾದಿಸಿದರು, ಎಂದು ಹೇಳಿದೆ. ಆದುದರಿಂದ ಉಪನಯನ ಸಂಸ್ಕಾರವನ್ನು ಪಡೆದ ಮೂರು ವರ್ಣದವರೊಡನೆ ವೇದಕ್ಕೆ ಸಂಬಂಧ. ಅದು ಹೇಗೆ ಪ್ರಮಾಣವೆಂದರೆ ತಾನಾಗಿಯೇ ಅದು ಎಲ್ಲವನ್ನು ಬೋಧಿಸುತ್ತವೆ.

ಪೌರುಷೇಯ ವಾಕ್ಯವಾದರೋ, ಅಂದರೆ ಪುರುಷರಿಂದ ನಿರ್ಮಿತವಾದ ವಾಕ್ಯವಾದರೋ, ಅದು ಬೋಧಿಸುವುದಾದರೂ, ಪುರುಷರಿಗೆ ಭ್ರಮೆ ಮುಂತಾದವು ಇರುವುದರಿಂದ ಅವರಿಂದ ಹೇಳಲ್ಪಟ್ಟ ವಾಕ್ಯಗಳಲ್ಲೂ ಆ ದೋಷಗಳು ಇರುತ್ತದೆ. ಅವನ್ನು ನೀಗಿಸಲು ಮೂಲ ಪ್ರಮಾಣದ ಅಪೇಕ್ಷೆ ಬೇಕಾಗು-ತ್ತದೆ. ವೇದಕ್ಕೆ ಹಾಗಿಲ್ಲ. ಅದು ನಿತ್ಯವಾದದ್ದು. ವಕ್ತೃದೋಷದ ಸಂದೇಹವೇ ಉಂಟಾಗದು. ಇದನ್ನೇ ಜೈಮಿನಿ ಋಷಿಗಳು ವ್ಯಾಸರ ಶಿಷ್ಯರು, 'ತತ್ಪ್ರಮಾಣಂ ಬಾದರಾಯಣಸ್ಯಾನಪೇಕ್ಷತ್ವಾತ್' ಎಂದು ಸೂತ್ರವನ್ನು ರಚಿಸಿ ಹೇಳಿದ್ದಾರೆ. (ಸೂ ೫, ಜೈಮಿನೀಯ ನ್ಯಾಯಮಾಲಾ, ಅ.೧, ಪಾ.೧, ಅಧಿ೪) ಇವುಗಳೆಲ್ಲದ್ದರಿಂದ ಪ್ರಮಾಣವು ತಾನಾಗಿಯೇ ಸಿದ್ಧವಾಗಿದೆ ಎಂದು ಹೇಳಿದ್ದಾರೆ.

ಈವಾಗ ಈ ವಿಷಯದಲ್ಲಿ ಒಂದು ಸಂದೇಹ ಬರಬಹುದು. ಕಾಳಿದಾಸಾದಿಗಳು ರಚಿಸಿರುವ ರಘುವಂಶಾದಿ ಗ್ರಂಥಗಳಂತೆ ಈ ವೇದವೂ ಬ್ರಹ್ಮನಿಂದ ನಿರ್ಮಿತವಾದುದರಿಂದ ಪೌರುಷೇಯುವೇ ಆಯಿತಲ್ಲ. ಋಚಃ ಸಾಮಾನಿ ಜಜ್ಞಿರೇ । ಛನ್ದಾಂಸಿ ಜಜ್ಞಿರೇ ತಸ್ಮಾತ್ । ಯಜುಸ್ತಸ್ಮಾದ ಜಾಯತ ।–ಋಕ್ಕುಗಳೂ ಸಾಮಗಳೂ ಹುಟ್ಟಿದವು. ಮುಂತಾಗಿ ವೇದವೇ ಹೇಳುತ್ತದಲ್ಲಾ. ಪೂಜ್ಯರಾದ ಬಾದರಾಯಣರೂ 'ಶಾಸ್ತ್ರಯೋನಿತ್ವಾತ್' ಎಂಬ ಸೂತ್ರದಲ್ಲಿ ಬ್ರಹ್ಮಕ್ಕೆ ವೇದ ಕಾರಣತ್ವವನ್ನು ಹೇಳಿದ್ದಾರೆ. ಅಂದರೆ, ಇದು ಸರಿಯಲ್ಲ. "ಶ್ರುತಿ ಮತ್ತು ಸ್ಮೃತಿಗಳು ವೇದವು ನಿತ್ಯವೆಂದು ಹೇಳುತ್ತವೆ."

"ವಾಚಾವಿರೂಪ ನಿತ್ಯಯಾ" — "ಎಲೌ ಅಗ್ನಿಯೇ ! ಯಾಗ ಮಾಡಲು ತಕ್ಕವನಾದ ಆ ದೇವನಿಗೆ ನಿತ್ಯವಾದ ವೈದಿಕ ಮಂತ್ರರೂಪವಾದ ಮಾತಿನಿಂದ ಮಾಡಲ್ಪಡಬೇಕಾದ ಮಂಗಳಕರವಾದ ಸ್ತೋತ್ರ

ವನ್ನು ಪ್ರೇರಿಸು. ಮೊದಲೇ ಹೇಳು." ಇದು ಶ್ರುತಿ. (ತೈ. ಸಂ. ೨ ಪ್ರ ೬ ಅ ಹನಸು ೬೨ ;)

"ಅನಾದಿ ನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ"–ಮೊದಲು ಕೊನೆ ಇಲ್ಲದ ಮಾತಾದದ್ದು (ಶ್ರುತಿ) ಬ್ರಹ್ಮನಿಂದ ಬಿಡಲ್ಪಟ್ಟಿತು" ಎಂದು ಸ್ಮೃತಿ ಹೇಳುತ್ತದೆ. ಬಾದರಾಯಣರೂ ಕೂಡ ದೇವತಾಧಿಕರಣದಲ್ಲಿ 'ಅತಏವಚಾನಿತ್ಯತ್ವಮ್' ಎಂದು ಸೂತ್ರವನ್ನು ರಚಿಸಿದ್ದಾರೆ.

ಶ್ರೀ ರಾಮಾನುಜಾಚಾರ್ಯರು ವೇದಾರ್ಥಸಂಗ್ರಹದಲ್ಲಿ "ವಾಕ್ಯಗಳ ಉಚ್ಚಾರಣ ಕ್ರಮವು ಎಲ್ಲಿ ಪುರುಷ ಬುದ್ಧಿಪೂರ್ವಕವಾಗಿರುವುದೋ ಅವು ಪೌರುಷೇಯ ಶಬ್ದಗಳು ಎನಿಸುವವು. ಆದರೆ ಎಲ್ಲಿ (ಆ) ಉಚ್ಚಾರಣಾ ಕ್ರಮವು ಹಿಂದು ಹಿಂದಿನ ಉಚ್ಚಾರಣ ಕ್ರಮದಿಂದಾದ ಸಂಸ್ಕಾರದಿಂದಾಗಿರುವುದೋ (ಅವು) ಯಾವಾಗಲೂ ಅಪೌರುಷೇಯವಾಗಿರುವವು ಮತ್ತು ಅವು ವೇದಗಳು ಎನಿಸುವವು. ಹಿಂದು ಹಿಂದಿನ ಉಚ್ಚಾರಣ ಕ್ರಮದಿಂದುಂಟಾದ ಸಂಸ್ಕಾರದಿಂದ ಅದೇ ಕ್ರಮವನ್ನು ಸ್ಮರಿಸಿಕೊಂಡು ಅದೇ ಕ್ರಮದಿಂದ ಉಚ್ಚರಿಸಲ್ಪಡುವುದೆಂಬುದೇ ವೇದಗಳು ಅಪೌರುಷೇಯ, ನಿತ್ಯವು ಎಂಬುದು. ಗೊತ್ತಾದ ಒಂದು ಆನುಕ್ರಮದಿಂದ ಇದ್ದುಕೊಂಡಿರುವ ಅಕ್ಷರರಾಶಿಗಳಿಂದ ಆ ವೇದಗಳು ಋಕ್ಕು ಯಜಸ್ಸು, ಸಾಮ, ಅಥರ್ವ ಎಂಬ ಭೇಧಗಳುಳ್ಳವಾಗಿ (ಒಂದೊಂದೂ) ಅನಂತ ಶಾಖೆಗಳುಳ್ಳವಾಗಿರುತ್ತವೆ. ವಿಧಿ, ಅರ್ಥವಾದ, ಮಂತ್ರ— ಎಂಬ ರೂಪದಲ್ಲಿರುವ ಆ ವೇದಗಳು ಪರಬ್ರಹ್ಮವಾಗಿರುವ ನಾರಾಯಣನ ಸ್ವರೂಪವನ್ನೂ, ಅವನ ಆರಾಧನಾ ಪ್ರಕಾರವನ್ನೂ ಆರಾಧನೆ ಮಾಡಿದ್ದರಿಂದಾಗುವ ವಿಶಿಷ್ಟವಾದ ಫಲವನ್ನೂ ಬೋಧಿಸುತ್ತವೆ. ಪರಮ ಪುರುಷನಂತೆಯೇ ಅವನ ಸ್ವರೂಪ, ಅವನ ಆರಾಧನ, ಆ (ಆರಾಧನೆಯ) ಫಲ—ಇವುಗಳನ್ನು ತಿಳಿಸಿಕೊಡುವ ವೇದವೆಂಬ ಹೆಸರಿನ ಶಬ್ದ ಜಾತವೂ ನಿತ್ಯವೇ (ಆಗಿರುತ್ತದೆ)" ಎಂದು ಹೇಳಿದ್ದಾರೆ.

### ಅನಂತರ ಗರ್ಭಾಧಾನಾದಿ ನಲವತ್ತು ಸಂಸ್ಕಾರಗಳು

ವೈದಿಕೈಃ ಕರ್ಮಭಿಃ ಪುಣ್ಯೈರ್ನಿಷೇಕಾದಿ ದ್ವಿಜನ್ಮನಾಮ್ ।
ಕಾರ್ಯಶ್ಶರೀರ ಸಂಸ್ಕಾರಃ ಪಾವನಃ ಪ್ರೇತ್ಯಚೇಹ ಚ ॥ ಎಂದು.

ಇದರ ಅರ್ಥ. ನಿಷೇಕಃ— ಗರ್ಭಾಧಾನ–ವೇದದಲ್ಲಿ ಹೇಳಲ್ಪಟ್ಟ ಪುಣ್ಯವಾದ ಕರ್ಮಗಳಿಂದ ದ್ವಿಜರಿಗೆ ಗರ್ಭಾಧಾನವೇ ಮೊದಲಾದ ಶರೀರ ಸಂಸ್ಕಾರವನ್ನು ಮಾಡತಕ್ಕದ್ದು. ಆ ಸಂಸ್ಕಾರವು ಈ ಲೋಕ–ದಲ್ಲಿರುವವರೆಗೂ ಇಲ್ಲಿಯೂ, ಸತ್ತನಂತರ ಬೇರೆ ಲೋಕದಲ್ಲಿಯೂ ಪವಿತ್ರವಾದದ್ದು, ಶ್ರೇಯಸ್ಕರ–ವಾದದ್ದು.

ಯಾಜ್ಞವಲ್ಕ್ಯರು :—
ಬ್ರಹ್ಮಕ್ಷತ್ರಿಯ ವಿಟ್ಛೂದ್ರಾ ವರ್ಣಾ ಸ್ತ್ವಾದ್ಯಾಸ್ತ್ರಯೋ ದ್ವಿಜಾಃ ।
ನಿಷೇಕಾದಿ ಶ್ಮಶಾನಾಂತಾಸ್ತೇಷಾಂ ವೈ ಮಂತ್ರತಃ ಕ್ರಿಯಾಃ ॥
ಚಿತ್ರಕರ್ಮ ಯಧಾನೇಕೈರಂಗೈರುನ್ಮೀಲ್ಯ ತೇ ಶನೈಃ ।
ಬ್ರಾಹ್ಮಣ್ಯಮಪಿ ತದ್ವತ್ಸ್ಯಾತ್ಸಂಸ್ಕಾರೈರ್ವಿಧಿಪೂರ್ವಕೈಃ ॥

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವು ವರ್ಣಗಳು, ಇವುಗಳಲ್ಲಿ ಮೊದಲನೆಯ ಮೂರು ವರ್ಣದವರೂ ದ್ವಿಜರು. ಇವರಿಗೆ ಗರ್ಭಾಧಾನವನ್ನು ಆರಂಭಿಸಿ ಶ್ಮಶಾನ ಕಾರ್ಯವೇ ಕೊನೆಯಾಗುವ–ವರೆಗೂ ಸಂಸ್ಕಾರಗಳನ್ನು ಮಂತ್ರಪೂರ್ವಕವಾಗಿ ಮಾಡಬೇಕು. ಇದು ಯಾಜ್ಞವಲ್ಕ್ಯರ ಮಾತು.

ಚಿತ್ರವನ್ನು ಬರೆಯುವವನು ಒಂದು ಚಿತ್ರವನ್ನು ಬರೆಯಲು ತೊಡಗಿ ಅದಕ್ಕೆ ತಕ್ಕ ಅವಯವಗಳನ್ನು ಮೆಲ್ಲಮೆಲ್ಲನೆ ಹೇಗೆ ರಚಿಸುತ್ತಾ ಚಿತ್ರವನ್ನು ಹೇಗೆ ಪೂರ್ತಿ ಮಾಡುತ್ತಾನೋ ಹಾಗೆ, ವಿಧಿಪೂರ್ವಕವಾದ ಸಂಸ್ಕಾರದಿಂದ ಬ್ರಾಹ್ಮಣ್ಯವೂ ಸಿದ್ಧಿಸುತ್ತದೆ ಎಂದು ಹೇಳುತ್ತಾರೆ.

ಗಾರ್ಭೈರ್ಹೋಮೈರ್ಜಾತಕರ್ಮ ಚೌಲಮೌಂಜೀನಿಬಂಧನೈಃ ।
ಬೈಜಿಕಂ ಗಾರ್ಭಿಕಂ ಚೈನೋ ದ್ವಿಜಾನಾಮಪಮೃಜ್ಯತೇ ॥

ಜಾತಕರ್ಮ, ಚೌಲ, ಮೌಂಜೀಬಂಧನ=ಉಪನಯನ ಇವಕ್ಕೆ ಸಂಬಂಧಪಟ್ಟ ಹೋಮಗಳು ಗಾರ್ಭಗಳು ಅಂದರೆ ಅಶುಚಿಯಾದ ಗರ್ಭದಲ್ಲಿ ವಾಸ ಮಾಡಿದುದರಿಂದ ಉಂಟಾದ ಪಾಪವನ್ನು ಹೋಗಲಾಡಿಸತಕ್ಕವು. ಬೈಜಿಕಂ—ಶುಕ್ಲಶೋಣಿತ ಇವಕ್ಕೆ ಸಂಬಂಧಪಟ್ಟದ್ದೂ, ಪುರುಷನ ರೇತಸ್ಸು ಸ್ತ್ರೀಯರ ರಕ್ತ ಇವುಗಳ ಕೂಡುವಿಕೆಯಿಂದುಂಟಾದ ದೋಷವನ್ನು ಹೋಗಲಾಡಿಸುತ್ತದೆ ಎಂದು ಮನುವೂ ಹೇಳುತ್ತಾರೆ.

ಏವಮೇನಶ್ಶಮಂ ಯಾತಿ ಬೀಜಗರ್ಭ ಸಮುದ್ಭವಮ್ ।

ಬೀಜ ಮತ್ತು ಗರ್ಭ ಇವಕ್ಕೆ ಸಂಬಂಧಪಟ್ಟ ಪಾಪವು ಈ ಜಾತಕರ್ಮಾದಿ ಸಂಸ್ಕಾರಗಳಿಂದ ಹೋಗುತ್ತವೆಯೆಂದೂ ಯಾಜ್ಞವಲ್ಕ್ಯರೂ ಹೇಳುತ್ತಾರೆ.

ಗೌತಮರಿಂದ ಈ ಸಂಸ್ಕಾರಗಳು ಈ ರೀತಿ ಹೇಳಲ್ಪಟ್ಟಿವೆ : —

ಗರ್ಭಾಧಾನ, ಪುಂಸುವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, ನಾಲ್ಕು ವೇದವ್ರತಗಳು (ಪ್ರಾಜಾಪತ್ಯ, ಸೌಮ್ಯ, ಆಗ್ನೇಯ, ವೈಶ್ವದೇವ,), ಸ್ನಾನ (ವ್ರತಸಮಾವರ್ತನ), ಸಹಧರ್ಮಚಾರಿಣೀ ಸಂಯೋಗ (ವಿವಾಹ), ಪಂಚಯಜ್ಞಗಳು (ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ಮನುಷ್ಯಯಜ್ಞ, ಬ್ರಹ್ಮಯಜ್ಞ), ಇವುಗಳ ಅನುಷ್ಠಾನ, ಆಗ್ರಹಾಯಣಕ್ಕಿಂತ ಮುಂಚೆ ಬರುವ ಮೂರು ಅಪರ ಪಕ್ಷಗಳು ಅಷ್ಟಕೆಗಳು—ಅವುಗಳ ಅನುಷ್ಠಾನ, ಪಾರ್ವಣ (ಸ್ಥಾಲೀಪಾಕ), ಮಾಸಿಶ್ರಾದ್ಧ, ಉಪಾಕರ್ಮ, ಆಗ್ರಯಣ, ಚೈತ್ರೀ (ಶೂಲಗವ, ಹೋಳ ಎಂಬ ಕರ್ಮ) ಆಶ್ವಯುಜೀ (ಇಂದ್ರ ಧ್ವಜ ಹೋಮ) — ಈ ಏಳು ಪಾಕ ಯಜ್ಞಗಳು. (ಪಾಕಯಜ್ಞ ಸಂಸ್ಥೆಗಳು, ಸಮ್ಯಕ್ ಸ್ಥಿತಾಃ = ಗೃಹ್ಯದಲ್ಲೇ ಚೆನ್ನಾಗಿ ಹೇಳಲ್ಪಟ್ಟಿವೆ, ಎಂದರ್ಥ.)

ಕೆಲವರು ಔಪಾಸನ ಹೋಮ, ವೈಶ್ವದೇವ, ಪಾರ್ವಣ, ಅಷ್ಟಕಾ, ಮಾಸಿಶ್ರಾದ್ಧ, ಸರ್ಪಬಲಿ, ಈಶಾನಬಲಿ ಇವು ಸಪ್ತಪಾಕ ಯಜ್ಞಗಳೆನ್ನುತ್ತಾರೆ.

ಅಗ್ನಿಹೋತ್ರ, ದರ್ಶಪೂರ್ಣಮಾಸ, ಆಗ್ರಯಣ, ಚಾತುರ್ಮಾಸ್ಯಗಳು, ನಿರೂಢ ಪಶುಬಂಧ, ಸೌತ್ರಾಮಣೀ, ಪಿಂಡಪಿತೃಯಜ್ಞಾದಿಗಳು—(ಇವೆಲ್ಲಾ ದರ್ವೀ ಹೋಮಗಳು) — ಈ ಏಳೂ ಹವಿರ್ಯಜ್ಞ ಸಂಸ್ಥೆಗಳು.

ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ್ಯ, ಷೋಡಶೀ, ವಾಜಪೇಯ, ಅತಿರಾತ್ರ ಆಪ್ತೋರ್ಯಾಮ — ಈ ಏಳೂ ಸೋಮ ಸಂಸ್ಥೆಗಳು.

ಈ ರೀತಿಯಾಗಿ ನಲವತ್ತು ಸಂಸ್ಕಾರಗಳು — ಎನ್ನುತ್ತಾರೆ, ಗೌತಮರು.

[ಗರ್ಭಾಧಾನಾದಿ...... ಉಪನಯನಾಂತ....... = ೮
ವೇದವ್ರತಗಳು .......................... = ೪

ಸ್ನಾನ, ವಿವಾಹ,ಪಂಚಮಹಾಯಜ್ಞಗಳಂ ...... = ೭
ಅಷ್ಟಕಾದಿ ಪಾಕಯಜ್ಞಗಳು ............... = ೭
ಅಗ್ನ್ಯಾಧೇಯಾದಿ ಹವಿರ್ಯಜ್ಞಗಳು............... = ೭
ಅಗ್ನಿಷ್ಟೋಮಾದಿ ಸೋಮ ಸಂಸ್ಥೆಗಳು ........... = ೭
ಹೀಗೆ ಒಟ್ಟು ......................... = ೪೦]

ಮನುವು ಉಪನಿಷ್ಕ್ರಮಣವೆಂಬ ಮತ್ತೊಂದು ಕರ್ಮವನ್ನೂ ಹೇಳಿದ್ದಾನೆ:—

ಚತುರ್ಥೇಮಾಸಿ ಕರ್ತವ್ಯಂ ಶಿಶೋರ್ನಿಷ್ಕ್ರಮಣಂ ಗೃಹಾತ್ ।

ಮಗುವು ಹುಟ್ಟಿದ ನಂತರ ನಾಲ್ಕನೇ ತಿಂಗಳಲ್ಲಿ, ಮನೆಯಿಂದ ಹೊರಗೆ ಕರೆದುಕೊಂಡು ಬರುವುದು ಅಂದರೆ, ದೇವಾಲಯಾದಿಗಳಿಗೆ ಮಗುವನ್ನು ಕರೆದುಕೊಂಡು ಹೋಗುವುದು ; ಇದೂ ಒಂದು ಕರ್ಮ-ವೆನ್ನುತ್ತಾರೆ. ಅದನ್ನು ಸ್ಮೃತಿಮುಕ್ತಾ ಫಲವೆಂಬ, ವೈದ್ಯನಾಥ ದೀಕ್ಷಿತರು ಬರೆದಿರುವ ಧರ್ಮಶಾಸ್ತ್ರ ಗ್ರಂಥದಲ್ಲೂ, ಗೌತಮಸೂತ್ರದಲ್ಲೂ ಸೇರಿಸದೇ ಇರುವುದರಿಂದ ಆ ಕರ್ಮವನ್ನು ಇಲ್ಲಿ ಕೈಬಿಟ್ಟಿದೆ.

ಗರ್ಭಾಧಾನಾದಿಗಳು ಬ್ರಾಹ್ಮಸಂಸ್ಕಾರಗಳಂ ಪಾಕಯಜ್ಞಾದಿಗಳಂ ದೈವಸಂಸ್ಕಾರಗಳು. ಇಲ್ಲಿ ಹಾರೀತರ ಮಾತು ಈ ರೀತಿ ಇದೆ ; "ದ್ವಿವಿಧ ಏವ ಸಂಸ್ಕಾರೋ ಭವತಿ, ಬ್ರಾಹ್ಮೋ ದೈವಶ್ಚ" — (ಎರಡು ವಿಧವಾದ ಸಂಸ್ಕಾರಗಳುಂಟು, ಬ್ರಾಹ್ಮ, ದೈವ ಎಂದು.) "ಗರ್ಭಾಧಾನಾದಿ ಸ್ಮಾರ್ತ ಸಂಸ್ಕಾರೋ ಬ್ರಾಹ್ಮಃ". ಸ್ಮೃತಿಯಲ್ಲಿ ಹೇಳಲ್ಪಟ್ಟ ಗರ್ಭಾಧಾನಾದಿ ಸಂಸ್ಕಾರಗಳು ಬ್ರಾಹ್ಮಗಳು. ಪಾಕ ಯಜ್ಞಾದಿಗಳು ದೈವಗಳು. ಬ್ರಾಹ್ಮ ಸಂಸ್ಕಾರಗಳಿಂದ ಸಂಸ್ಕರಿಸಲ್ಪಟ್ಟವನು ಋಷಿಗಳಿಗೆ ಸಮಾನ-ಗುಣ ಪಡೆಯುವಿಕೆಯನ್ನೂ ಹೊಂದುತ್ತಾನೆ. ದೈವ ಸಂಸ್ಕಾರಗಳಿಂದ ಸಂಸ್ಕರಿಸಲ್ಪಟ್ಟವನು, ದೇವತೆ ಗಳಿಗೆ ಸಮಾನತೆಯನ್ನೂ ಸಮಾನವಾದ ಲೋಕದಲ್ಲಿ ವಾಸ ಮಾಡುವಿಕೆಯನ್ನೂ ಪಡೆಯುತ್ತಾನೆ — ಎನ್ನುತ್ತಾರೆ.

ಈ ಮಾತು ಆತ್ಮಗುಣವಿಲ್ಲದೆ ಸಂಸ್ಕಾರವನ್ನು ಪಡೆದವನು ಹೊಂದುವ ಸ್ಥಾನಮಾನಗಳನ್ನು ಹೇಳಿದ್ದು, ಆತ್ಮಗುಣ ಪರಿಪೂರ್ಣನಾಗಿ ಸಂಸ್ಕಾರವನ್ನು ಪಡೆದವನು ಪರಬ್ರಹ್ಮದ ಸಾಯುಜ್ಯವನ್ನು ಹೊಂದುತ್ತಾನೆ. ಪರಬ್ರಹ್ಮಕ್ಕೆ ಸಮಾನವಾದ ಗುಣಗಳನ್ನೂ ಹೊಂದಿ, ಸಂಪೂರ್ಣವಾದ ಭೋಗ ಗಳನ್ನು ಅನುಭವಿಸುತ್ತಾನೆ. ಶ್ರಿಯಃ ಪತಿತ್ವ, ಮತ್ತು ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳು—ಇವು ಮಾತ್ರ ಇವನಿಗೆ ಇಲ್ಲ. ಪರಬ್ರಹ್ಮವನ್ನು ಪಡೆದು ಮತ್ತೆ ಹಿಂತಿರುಗುವುದಿಲ್ಲ ಈ ಸಂಸ್ಕಾರದಿಂದ ಸಂಸ್ಕರಿಸಲ್ಪಟ್ಟವನು.

ಸಂಸ್ಕಾರೈಃ ಸಂಸ್ಕೃತಃ ಪೂರ್ವೈಃ ಉತ್ತರೈರಪಿ ಸಂಸ್ಕೃತಃ ।
ನಿತ್ಯಮಷ್ಟಗುಣೈರ್ಯುಕ್ತೋ ಬ್ರಾಹ್ಮಣೋ ಬ್ರಹ್ಮ ಲೌಕಿಕಂ ॥
ಬ್ರಾಹ್ಮಂ ಪದಮವಾಪ್ನೋತಿ ಯಸ್ಮಾನ್ನ ಚ್ಯವತೇ ಪುನಃ ॥
ಎಂದು ಹೇಳುತ್ತಾರೆ.

ಈ ಆತ್ಮಗುಣಗಳಾವುವೆಂದರೆ, ಎಲ್ಲಾ ಭೂತಗಳಲ್ಲೂ ದಯೆ, ಕ್ಷಾಂತಿ, ಸಹನೆ, ಅಸೂಯೆಯಿಲ್ಲ-ದಿರುವಿಕೆ, ಶುಚಿಯಾಗಿರುವಿಕೆ, ಆಯಾಸಮಾಡಿಕೊಳ್ಳದಿರುವಿಕೆ. ಮಂಗಳ, ಅಕಾರ್ಪಣ್ಯ, ಅಸ್ಪೃಹಾ — ಇವು ಎಂಟು.

ಈ ಒಂದೊಂದು ಗುಣಕ್ಕೂ ಬೃಹಸ್ಪತಿಗಳು ಲಕ್ಷಣವನ್ನು ಹೇಳುತ್ತಾರೆ :—

ಪರೇ ವಾ ಬಂಧುವರ್ಗೇ ವಾ ಮಿತ್ರೇ ದ್ವೇಷ್ಟರಿ ವಾ ಸದಾ ।
ಆಪದೋ ರಕ್ಷಣಂ ಯತ್ತು ಸಾ ದಯಾ ಪರಿಕೀರ್ತಿತಾ ॥

ಯಾವ ವಿಧವಾದ ಸಂಬಂಧವೂ ಇಲ್ಲದ, ಉದಾಸೀನನಾದ ಮನುಷ್ಯ, ಅಥವಾ ಬಂಧುಗಳ ಗುಂಪಿನವನು, ಸ್ನೇಹಿತ, ಯಾವಾಗಲೂ ನಮ್ಮನ್ನು ದ್ವೇಷಿಸುವವನು—ಇವರು ಕಷ್ಟಕ್ಕೆ ಸಿಕ್ಕಿದ್ದರೆ, ಅವರನ್ನು ಅದರಿಂದ ಕಾಪಾಡುವುದು ದಯೆ ಎಂದು ಹೇಳಲ್ಪಡುತ್ತದೆ.

ಬಾಹ್ಯೇ ಚಾಭ್ಯಂತರೇ ಚೈವ ದುಃಖ ಉತ್ಪಾದಿತೇ ಪರೈಃ ।
ನ ಪ್ರಕುಪ್ಯತಿ ನೋ ಹನ್ತಿ ಸಾ ಕ್ಷಮಾ ಪರಿಕೀರ್ತಿತಾ ॥

ನಮ್ಮ ಶರೀರದ ಒಳಗೋ ಅಥವಾ ಹೊರಗೋ ಮತ್ತೊಬ್ಬನು ದುಃಖವನ್ನುಂಟು ಮಾಡಿದರೂ, (ಅಂದರೆ, ಹಿತವಿಲ್ಲದ ಮಾತನ್ನಾಡಿ ಮನಸ್ಸನ್ನು ನೋಯಿಸುವಿಕೆ, ಹೊಡೆದೂ ಬಡಿದೂ ದುಃಖವನ್ನುಂಟು ಮಾಡುವುದು) ಆ ದುಃಖಕಾರಣನಾದವನನ್ನು ಕೋಪಿಸಿಕೊಳ್ಳದೆ, ಬದಲಾಗಿ, ಅವರನ್ನು ಹೊಡೆಯದೆ ಬಡಿಯದೆ ಇರುವಿಕೆಯು ಕ್ಷಮಾ–ಸಹನೆ ಎನಿಸಿಕೊಳ್ಳುತ್ತದೆ.

ಯೋ ಧರ್ಮಮರ್ಥಂ ಕಾಮಂ ವಾ ಲಭತೇ ಮೋಕ್ಷಮೇವ ವಾ ।
ನ ದ್ವಿಷ್ಯಾತ್ ತಂ ಸದಾ ಪ್ರಾಜ್ಞಃ ಸಾನಸೂಯಾ ಸ್ಮೃತಾ ಬುಧೈಃ ॥

ಜ್ಞಾನಿ-ತಿಳಿದವನು, ಇನ್ನೊಬ್ಬನು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬ ಈ ಪುರುಷ ಪ್ರಯೋ-ವನ್ನು ಹೊಂದಿದರೆ, ಅವನನ್ನು ದ್ವೇಷಿಸಕೂಡದು. ಈ ಗುಣವನ್ನೇ ಪಂಡಿತರು ಅನಸೂಯೆ ಎನ್ನುವರು. (ಮತೊಬ್ಬರ ಹೆಚ್ಚಳವನ್ನು ಸಹಿಸದೇ ಇರುವಿಕೆಯೇ ಅಸೂಯೆ.)

ಅಭಕ್ಷ್ಯ ಪರಿಹಾರಶ್ಚ ಸಂಸರ್ಗಶ್ಚಾಪ್ಯನಿಂದಿತೈಃ ।
ಸ್ವಧರ್ಮೇ ಚ ವ್ಯವಸ್ಥಾನಂ ಶೌಚಮೇತತ್ ಪ್ರಕೀರ್ತಿತಂ ॥

ಶಾಸ್ತ್ರದಲ್ಲಿ ನಿಷೇಧಿಸಲ್ಪಟ್ಟಿದ್ದನ್ನು ತಿನ್ನದೇ ಇರುವುದು, ದೋಷವಿಲ್ಲದಿರುವವರೊಡನೆ ಕಲೆಯುವಿಕೆ, ತನ್ನ ಧರ್ಮದಲ್ಲಿರುವುದು — ಇದು ಶೌಚವೆನಿಸಿಕೊಳ್ಳುತ್ತದೆ.

ಯದಾರಂಭೇ ಭವೇತ್ಪೀಡಾ ನಿತ್ಯಮತ್ಯಂತಮಾತ್ಮನಃ ।
ತದ್ವರ್ಜಯೇತ್ ಧರ್ಮಮಪಿ ಸೋಽನಾಯಾಸಃ ಪ್ರಕೀರ್ತಿತಃ॥

ಯಾವುದಾದರೂ ಕೆಲಸವನ್ನು ಮಾಡುವಾಗಲೇ ತನಗೆ ನಿತ್ಯವೂ ಬಹಳ ತೊಂದರೆಯಾಗುತ್ತದೋ ಆ ಕೆಲಸವು ಧರ್ಮಕ್ಕೆ ಸಂಬಂಧಪಟ್ಟದಾಗಿದ್ದರೂ, ಅದನ್ನು ಬಿಡಬೇಕು. ಇದೇ ಅನಾಯಾಸವೆಂಬ ಗುಣ.

ಪ್ರಶಸ್ತಾಚರಣಂ ನಿತ್ಯಂ ಅಪ್ರಶಸ್ತ ವಿವರ್ಜನಂ ।
ಏತದ್ಧಿ ಮಂಗಳಂ ಪ್ರೋಕ್ತಂ ಋಷಿಭಿಃ ತತ್ತ್ವದರ್ಶಿಭಿಃ ॥

ಎಲ್ಲರೂ ಕೊಂಡಾಡುವ ಕಾರ್ಯವನ್ನು ನಿತ್ಯವೂ ಮಾಡಬೇಕು ; ದೂಷಿಸುವ, ಮಾಡಬಾರದೆನ್ನುವ ಕಾರ್ಯವನ್ನು ಮಾಡಕೂಡದು. ಇದೇ ಮಂಗಳವಾದದ್ದೆಂದು ಋಷಿಗಳು ಹೇಳುತ್ತಾರೆ.

ಸ್ತೋಕಾದಪಿ ಹಿ ದಾತವ್ಯಂ ಮುದಿತೇನಾಂತರಾತ್ಮನಾ ।
ಅಹನ್ಯಹನಿ ಯತ್ಕಿಂಚಿತ್ ಅಕಾರ್ಪಣ್ಯಂ ಹಿ ತತ್ ಸ್ಮೃತಂ ॥

ಕಾರ್ಪಣ್ಯವಿಲ್ಲದಿರುವಿಕೆಯೆಂದರೆ, ನಿತ್ಯವೂ ನಮ್ಮಲ್ಲಿರುವ ಅಲ್ಪವಾದುದರಲ್ಲಿಯೂ, ಸ್ವಲ್ಪವನ್ನಾದರೂ ಸಂತೋಷವಾದ ಮನಸ್ಸಿನಿಂದ ಮತ್ತೊಬ್ಬರಿಗೆ ಕೊಡುವುದು.

ಯಥೋತ್ಪನ್ನೈಸ್ತು ಸಂತೋಷಃ ಕರ್ತವ್ಯೈಃ ಸ್ವಾರ್ಜಿತೈಃ ಧನೈಃ ।
ಪರಾರ್ಥಂ ನಾಭಿಲಾಷೇತ ಸಾಽಸ್ಪೃಹಾ ಪರಿಕೀರ್ತಿತಾ ॥

ಅಸ್ಪೃಹಾ —ಆಸೆಯಿಲ್ಲದಿರುವಿಕೆ ಎಂದರೆ, ತಾನು ಸಂಪಾದಿಸಿದ ಹಣದಿಂದ ಎಷ್ಟು ಉಂಟಾಗುತ್ತದೋ ಅಷ್ಟರಲ್ಲಿ ಸಂತೋಷಪಡಬೇಕು. ಮತ್ತೊಬ್ಬರ ಹಣವನ್ನು ಅಪೇಕ್ಷಿಸಕೂಡದು.

ಈ ಮೇಲೆ ಹೇಳಿದ ಆತ್ಮಗುಣದಿಂದ ಕೂಡಿದ ಎಲ್ಲಾ ದ್ವಿಜಾತಿಗಳಿಗೂ ಅವಶ್ಯಕವಾಗಿ ಆಗಬೇಕಾದ ಸಂಸ್ಕಾರಗಳು, ಗರ್ಭಾಧಾನದಿಂದ ಆರಂಭವಾಗಿ ಉಪನಯನದವರೆಗೂ ಇರುವ ಸಂಸ್ಕಾರಗಳು. ಸ್ನಾನಾದಿ ಕರ್ಮಗಳು ಮುಖ್ಯವಲ್ಲ. ಬ್ರಹ್ಮಚರ್ಯದಿಂದಲೇ ಸಂನ್ಯಾಸಕ್ಕೆ ಹೋಗಬಹುದು ಎಂದು ಶಾಸ್ತ್ರವಿರುವುದರಿಂದ ಇತರ ಸಂಸ್ಕಾರಗಳು ನಿಯತವಲ್ಲವಾದುವು.

ಈ ರೀತಿ ಚತ್ವಾರಿಂಶತ್ (೪೦) ಸಂಸ್ಕಾರಗಳು. ಇವುಗಳಲ್ಲಿ ಮುಖ್ಯವಾದುವುಗಳ ಸಂಗ್ರಹ ಶ್ಲೋಕಗಳು ಹೀಗಿವೆ.

ಗರ್ಭಾಧಾನಂ (೧) ಪುಂಸವನಂ (೨) ಸೀಮಂತೋ (೩) ಜಾತಕರ್ಮ ಚ (೪) ।
ನಾಮಕ್ರಿಯಾ (೫) ನಿಷ್ಕ್ರಮಣೋ (೬) ಽನ್ನ ಪ್ರಾಶನಂ (೭) ವಪನ ಕ್ರಿಯಾ (೮) ॥
ಕರ್ಣವೇಧೋ (೯) ವ್ರತಾದೇಶೋ (೧೦,೧೧,೧೨,೧೩,) ವೇದಾರಂಭಃ (೧೪) ಕ್ರಿಯಾವಿಧಿಃ ।
ಕೇಶಾನ್ತಸ್ನಾನಂ (೧೫) ಉದ್ವಾಹೋ ವಿವಾಹಾಗ್ನಿ ಪರಿಗ್ರಹಃ (೧೬) ॥
ತ್ರೇತಾಗ್ನಿ ಸಂಗ್ರಹಶ್ಚೈವ ಸಂಸ್ಕಾರಾಃ ಷೋಡಶಸ್ಮೃತಾಃ ॥
ಇವೇ ಮುಖ್ಯವೆನಿಸಿದ ಹದಿನಾರು ಸಂಸ್ಕಾರಗಳು.

### ಗರ್ಭಾಧಾನ

ರಜಸ್ವಲೆಯಾದ ಹೆಂಗಸು ನಾಲ್ಕನೆಯ ದಿವಸ ಸ್ನಾನದಿಂದ ಶುದ್ಧಳಾಗುತ್ತಾಳೆ. ಋತುಕಾಲ ರಜೋದರ್ಶನವಾದನಂತರ ಹದಿನಾರು ದಿವಸಗಳು—ಅವುಗಳಲ್ಲಿ ಮೊದಲನೆಯ ನಾಲ್ಕು ರಾತ್ರಿಗಳು ನಿಂದಿತಗಳು —ದೋಷದಿಂದ ಕೂಡಿದವು. ಆ ಕಾಲದಲ್ಲಿ ಸ್ತ್ರೀ ಸಂಗವು ಮಾಡಕೂಡದು.

ತಾಸಾಮಾದ್ಯಾಃ ಚತಸ್ರಸ್ತು ನಿಂದಿತೈಕಾದಶೀ ಚ ಯಾ ।
ತ್ರಯೋದಶೀ ಚ ಶೇಷಾಸ್ತು ಪ್ರಶಸ್ತಾ ದಶರಾತ್ರಯಃ ॥
ಯುಗ್ಮಾಸು ಪುತ್ರಾ ಜಾಯನ್ತೇ ಸ್ತ್ರಿಯೋ ಯುಗ್ಮಾಸು ರಾತ್ರಿಷು ।
ತಸ್ಮಾದ್ಯುಗ್ಮಾಸು ಪುತ್ರಾರ್ಥೀ ಸಂವಿಶೇದಾರ್ತವೇ ಸ್ತ್ರಿಯಂ ॥
ಅಮಾವಾಸ್ಯಾಂ ಅಷ್ಟಮೀಂ ಚ ಪೌರ್ಣಮಾಸೀಂ ಚತುರ್ದಶೀಂ ।
ಬ್ರಹ್ಮಚಾರೀ ಭವೇನ್ನಿತ್ಯಂ ಅಪ್ಯೃತೌ ಸ್ನಾತಕೋ ದ್ವಿಜಃ ॥

ಹಾಗೆಯೇ ಏಕಾದಶೀ ತ್ರಯೋದಶೀ ತಿಥಿಗಳನ್ನು ಬಿಟ್ಟು ಮಿಕ್ಕ ಹತ್ತು ರಾತ್ರಿಗಳು ಸಮಾಗಮಕ್ಕೆ ಪ್ರಶಸ್ತವಾದಂವು. ಋತುವಾದ ದಿವಸದಿಂದ ಸಮವಾದ ದಿವಸಗಳಲ್ಲಿ ದಂಪತಿಗಳ ಸಮಾಗಮವಾದರೆ ಗಂಡು ಸಂತಾನವಾಗುತ್ತದೆ. ವಿಷಮ ದಿವಸಗಳಲ್ಲಿ ದಂಪತಿಗಳ ಸಮಾಗಮವಾದರೆ ಸ್ತ್ರೀ ಪ್ರಜೆ ಹುಟ್ಟುತ್ತದೆ. ಅಮಾವಾಸ್ಯೆ, ಅಷ್ಟಮಿ, ಚತುರ್ದಶೀ ಮತ್ತು ಹುಣ್ಣಿಮೆ ಇವುಗಳಲ್ಲಿ ಪ್ರವೇಶಿಸಕೂಡದು. ಹೀಗೆ ದಿನಶುದ್ಧಿ ಇರುವ ದಿವಸಗಳಲ್ಲಿ ಋತುಕಾಲದಲ್ಲಿ ಭಾರ್ಯಾಸುಖವನ್ನು ಅನುಭವಿಸುವ ದ್ವಿಜನು ಬ್ರಹ್ಮಚಾರಿಯೇ ಆಗಿರುತ್ತಾನೆ.

ಯಥಾ ಕಾಮೀ ಭವೇದ್ವಾಪಿ ಸ್ತ್ರೀಣಾಂ ವರಮನುಸ್ಮರನ್ ।
ಸ್ವದಾರನಿರತಶ್ಚೈವ ಸ್ತ್ರಿಯೋ ರಕ್ಷ್ಯಾಃ ಯತಃ ಸ್ಮೃತಾಃ ॥

ಭಾರ್ಯೆಯ ಇಚ್ಛೆಯನ್ನು ಅನುಸರಿಸಿ ಪ್ರವರ್ತಿಸಬೇಕು. ಇಂದ್ರನು ಸ್ತ್ರೀಯರಿಗೆ ವರವನ್ನು ಕೊಟ್ಟಿದ್ದಾನೆ. ಅದನ್ನು ನೆನಪಿನಲ್ಲಿಟ್ಟು ಅವಳೊಡನೆ ಸಮಾಗಮ ಮಾಡಬೇಕು—ಎಂದು ಯಾಜ್ಞವಲ್ಕ್ಯರು ಹೇಳುತ್ತಾರೆ.

**(ವರ ಪ್ರದಾನದ ವಿವರ :—** ತ್ವಷ್ಟೃವಿನ ಮಗ ವಿಶ್ವರೂಪ. ಅವನು ದೇವತೆಗಳ ಪುರೋಹಿತ-ಅವನಿಗೆ ಮೂರು ತಲೆಗಳಿದ್ದವು. ಅವನು ಮಾಡಿದ ಮೋಸಕ್ಕಾಗಿ ಇಂದ್ರನು ಅವುಗಳನ್ನು ತನ್ನ ವಜ್ರಾಯುಧದಿಂದ ಕತ್ತರಿಸಿದನು. ಆವಾಗ ಇವನಿಗೆ ಬ್ರಹ್ಮಹತ್ಯಾದೋಷ ಬಂದಿತು. ಸ್ತ್ರೀ ಸಮೂಹಕ್ಕೆ ಹೋಗಿ "ನನ್ನ ಬ್ರಹ್ಮಹತ್ಯೆಯ ದೋಷದ ಪಾಲನ್ನು ನೀವು ಸ್ವೀಕರಿಸಬೇಕು" ಎಂದು ಅವರನ್ನು ಇಂದ್ರನು ಬೇಡಿದನು. ಆಗ ಅವರು "ಹೆರಿಗೆ ಆಗುವವರೆಗೂ ನಮ್ಮ ಬಯಕೆಗೆ ತಕ್ಕಂತೆ, ನಮ್ಮ ಪತಿಗಳೊಡನೆ ಸಮಾಗಮವಾಗಬೇಕು ; ಗರ್ಭವೂ ಸುಖವಾಗಿ ಬೆಳೆಯಬೇಕು. ಈ ರೀತಿ ನೀನು ವರ ಕೊಟ್ಟರೆ ನಿನ್ನ ಬ್ರಹ್ಮಹತ್ಯೆಯ ಭಾಗವನ್ನು ತೆಗೆದುಕೊಳ್ಳುತ್ತೇವೆ" ಎಂದರು. ಅದಕ್ಕೆ ಅವನು ಒಪ್ಪಿದನು. ಅಂತೂ ಮೊದಲನೆಯ ಕೂಡುವಿಕೆಯಲ್ಲಿ ಗರ್ಭವು ಉಂಟಾಗುತ್ತದೆ. ಎರಡನೆಯ ಪ್ರವೃತ್ತಿಯು ಪ್ರಜೆಯನ್ನು ಪಡೆಯುವುದಕ್ಕಾಗಿ ಅಲ್ಲ. ಕಾಮಕ್ಕೆ ತಕ್ಕಂತೆ, ಪ್ರಸವವಾಗುವವರೆಗೆ ಸಂಭೋಗ ಸುಖವನ್ನು ಅನುಭವಿಸುವುದು ಉದ್ದೇಶ್ಯ. ಇದೇ ಅವರು ಪಡೆದ ವರದ ಫಲ.)

ವೇದದಲ್ಲಿ "ತ್ರಿಸ್ರೋ ರಾತ್ರೀಃ ವ್ರತಂ ಚರೇತ್" (ಮೂರು ರಾತ್ರಿಯು, ರಜಸ್ವಲೆಯಾದವಳು ವ್ರತಾಚರಣೆ ಮಾಡಬೇಕು) ಎಂದು ಹೇಳಿದೆ "ಚತುರ್ಥೇಽಹನಿ ಶುದ್ಧ್ಯತಿ" (ನಾಲ್ಕನೆಯ ದಿನ ಸ್ನಾನದಿಂದ ಶುದ್ಧಳಾಗುತ್ತಾಳೆ.) ರಜೋ ನಿವೃತ್ತಿಯಾದರೆ ದೈವ ಪಿತ್ರ್ಯಾದಿ ಕರ್ಮಗಳ ಆಚರಣೆಗೆ ಅರ್ಹ-ಳಾಗುತ್ತಾಳೆ ಎಂದು ಸ್ಮೃತಿಯೂ ಹೇಳುತ್ತದೆ. ಆದರೆ, ಅಂದು ದಂಪತಿಗಳಿಗೆ ಸಮಾಗಮವಾಗಿ ಶಿಶುವು ಜನಿಸಿದರೆ ಆ ಶಿಶುವೂ ಅಲ್ಪವಾದ ಆಯುಸ್ಸು ಉಳ್ಳದ್ದಾಗಿ ಆಗುತ್ತದೆಂದೂ ಬಡತನದಿಂದ ಕೂಡಿರುವು-ದೆಂದೂ ಶಾಸ್ತ್ರವು ಹೇಳುತ್ತದೆ.

ರಾತ್ರೌ ಚತುರ್ಥ್ಯಾಂ ಪುತ್ರಸ್ಸ್ಯಾತ್ ಅಲ್ಪಾಯುರ್ಧನ ವರ್ಜಿತಃ ।
ಎಂದೂ ವ್ಯಾಸರ ಮಾತು.

ಋತು ಕಾಲದಲ್ಲಿ ಗಮನ ಮಾಡತಕ್ಕ ನಿಯಮಗಳೆಲ್ಲವೂ ಮಗನನ್ನು ಪಡೆಯದೇ ಇರುವವನಿಗೇ ಸಂಬಂಧ ಪಟ್ಟವು.

ಯಾವ ಪುತ್ರನು ಹುಟ್ಟಿದ ಮಾತ್ರದಿಂದಲೇ ಪಿತೃಋಣವು ತೀರಿತೋ ಅವನೇ ಧರ್ಮಪುತ್ರ. ಇತರರೆಲ್ಲರೂ ಕಾಮದಿಂದ ಹುಟ್ಟಿದವರು ಎಂದು ಮನು ಮಹರ್ಷಿ ಹೇಳುತ್ತಾರೆ.

## ಪುಂಸುವನಂ

ಪುಂಸುವನ ಎಂಬುದು ಕರ್ಮದ ಹೆಸರು. ಯಾವ ಕರ್ಮದಿಂದ, ಗರ್ಭಿಣಿಯಾದವಳು ಗಂಡುಮಗುವನ್ನು ಪಡೆಯುತ್ತಾಳೋ (ಹಡೆಯುತ್ತಾಳೋ) ಅದು ಪುಂಸುವನ. 'ಪುಮಾಂಸಂ ಸೂತೇ ಇತಿ ಪುಂಸುವನಂ' ಎಂಬುದು ಇದರ ನಿರ್ವಚನ. ಆದರೆ ಇದು ಅರ್ಥವಾದ ಮಾತ್ರ. (ಕೊಂಡಾಟದ ಮಾತು). ಪ್ರಥಮ ಗರ್ಭದಲ್ಲಿ ಹೆಣ್ಣು ಮಗುವೂ ಹುಟ್ಟುವುದುಂಟಲ್ಲಾ ! ಆಶ್ವಲಾಯನರಾದರೋ 'ಪುಂಸಂವನ' ಎಂದು ಗುಣವನ್ನೇ ಪ್ರಯೋಗಿಸಿದರು. ಈ ಕರ್ಮವನ್ನು ('ವ್ಯಕ್ತೇ ಗರ್ಭೇ') ಅಂದರೆ 'ಗರ್ಭ ಇದೆ' ಎಂದು ನಿಶ್ಚಯವಾದರೆ, ಮೂರು ಅಥವಾ ನಾಲ್ಕನೇ ತಿಂಗಳಲ್ಲಿ, ಪುಷ್ಯ ನಕ್ಷತ್ರದಲ್ಲಿ ಮಾಡಬೇಕು.

ಪಾರಸ್ಕರರು :— "ಮಾಸೇ ದ್ವಿತೀಯೇ ತೃತೀಯೇ ವಾ ಯದಹಃ ಪುಂ ನಕ್ಷತ್ರೇಣ ಚಂದ್ರಮಾ, ಯುಕ್ತಃ ಸ್ಯಾತ್" ಎಂದು ಸೂತ್ರಿಸಿದ್ದಾರೆ. ಪುಂ ನಕ್ಷತ್ರದೊಡನೆ ಚಂದ್ರನು ಕೂಡಿದ್ದರೆ, ಆದಿವಸ, ಎರಡು ಅಥವಾ ಮೂರನೇ ತಿಂಗಳಿನಲ್ಲಿ ಈ ಕರ್ಮವನ್ನು ಮಾಡಬೇಕೆಂದು ಈ ಸೂತ್ರದ ಅರ್ಥ. ಗರ್ಭ ಚಲಿಸುವುದಕ್ಕೆ ಮೊದಲು ಮಾಡಬೇಕೆಂದು ಯಾಜ್ಞವಲ್ಕ್ಯರೂ,

ಗರ್ಭಾಧಾನಂ ಋತೌ ಕುರ್ಯಾತ್ ಸುವನಂ ಸ್ಪಂದಿತೇ ಶಿಶೌ ।
"ಋತುಕಾಲದಲ್ಲಿ ಗರ್ಭಾಧಾನವನ್ನೂ, ಗರ್ಭವು ಚಲಿಸುವುದಕ್ಕೆ ಮುಂಚೆ ಪುಂಸುವನವನ್ನೂ ಮಾಡ–ಬೇಕೆಂದು ಬೃಹಸ್ಪತಿಯೂ ಹೇಳುತ್ತಾರೆ.

ಹಸ್ತ, ಮೂಲ, ಶ್ರವಣ, ಪುನರ್ವಸೂ, ಮೃಗಶಿರಾ ಮತ್ತು ಪುಷ್ಯ—ಇವು ಪುಂ ನಕ್ಷತ್ರಗಳೆಂದು ರತ್ನಕೋಶವೆಂಬ ಗ್ರಂಥದಲ್ಲಿ ಹೇಳಿದೆ. ಈ ಕರ್ಮವನ್ನು ಆ ಕಾಲದಲ್ಲಿ ಮಾಡದೇ ಇದ್ದರೆ, ಸೀಮಂತದೊಡನೆ ಮಾಡಬೇಕು. ಇದು ಆಧಾರ ಸಂಸ್ಕಾರ. ಅದರ ಮೂಲಕವಾಗಿ ಎಲ್ಲ ಗರ್ಭಗಳಿಗೂ ಸಂಸ್ಕಾರವಾಗುತ್ತದೆ—ಎಂಬುದು ಕೆಲವರ ಅಭಿಪ್ರಾಯ. ಪ್ರತಿಗರ್ಭದಲ್ಲೂ ಮಾಡಬೇಕೆಂದು ಮತ್ತೆ ಕೆಲವರು ಹೇಳುತ್ತಾರೆ. 'ಪುಮಾಂಸಂ ಜನಯತಿ', 'ಈ ಸಂಸ್ಕಾರವು ಗಂಡನ್ನು ಹುಟ್ಟಿಸುತ್ತದೆ' ಎಂದು ಆಪಸ್ತಂಬರು ಹೇಳಿದ್ದಾರೆ. ಆದುದರಿಂದ ಹೀಗೆ—ಎನ್ನುತ್ತಾರೆ.

## ಸೀಮಂತೋನ್ನಯನ

ಸೀಮನ್ತೋನ್ನಯನವನ್ನು ಗರ್ಭಾಧಾರಣವಾದ ಮೇಲೆ ನಾಲ್ಕು ಅಥವಾ ಐದು, ಆರನೇ ತಿಂಗಳಿನಲ್ಲಿ ಮಾಡಬೇಕೆಂದು ಬೈಜಾವಾಪರೆಂಬ ಋಷಿಗಳು ಹೇಳುತ್ತಾರೆ. ಯಾಜ್ಞವಲ್ಕ್ಯರಾದರೋ

ಷಷ್ಠೇಽಷ್ಟಮೇ ವಾ ಸೀಮನ್ತೋ ಮಾಸ್ಯೇತೇ ಜಾತಕರ್ಮ ಚ ।
(ಆರನೆಯ ಅಥವಾ ಎಂಟನೆಯ ತಿಂಗಳಿನಲ್ಲಿ ಸೀಮಂತವನ್ನೂ, 'ಏತೇ = ಜಾತೇ'—ಮಗು ಹುಟ್ಟಿದರೆ ಜಾತಕರ್ಮವನ್ನು ಮಾಡಬೇಕು) ಎನ್ನುತ್ತಾರೆ. ಇದು ಸ್ತ್ರೀಸಂಸ್ಕಾರ, ಗರ್ಭಸಂಸ್ಕಾರವಲ್ಲ.

ಸಕೃತ್ ಸಂಸ್ಕೃತ ಸಂಸ್ಕಾರಾಃ ಸೀಮಂತೇನ ದ್ವಿಜಸ್ತ್ರಿಯಃ ।
ಯಂ ಯಂ ಗರ್ಭಂ ಪ್ರಸೂಯೇತ ಸ ಸರ್ವಃ ಸಂಸ್ಕೃತೋ ಭವೇತ್ ॥

ಎಂದು ಹಾರೀತರು ಹೇಳುತ್ತಾರೆ. (ಸೀಮಂತವನ್ನು ಒಮ್ಮೆ ಮಾಡಿದರಾಯಿತು, ದ್ವಿಜಸ್ತ್ರೀಯರಿಗೆ ಇಷ್ಟು ಸಾಕು. ಮುಂದೆ ಹಡೆಯುವ ಗರ್ಭಗಳೆಲ್ಲ ಇದರಿಂದಲೇ ಸಂಸ್ಕೃತವಾಗಿ ಬಿಡುವುವು.) ಕೆಲವರು ಗರ್ಭದ ಸಂಸ್ಕಾರವಾದುದರಿಂದ ಪ್ರತಿಯೊಂದು ಗರ್ಭದಲ್ಲೂ ಇದನ್ನು ಮಾಡಬೇಕೆನ್ನುತ್ತಾರೆ. ತಮ್ಮ

ತಮ್ಮ ಗೃಹ್ಯಸೂತ್ರಕ್ಕೆ ಅನುಸಾರವಾಗಿ ಈ ಪಕ್ಷಗಳನ್ನು ವ್ಯವಸ್ಥೆಮಾಡಿಕೊಳ್ಳಬೇಕು.

ಒಂದು ವೇಳೆ ಸೀಮಂತವಾಗುವುದಕ್ಕೆ ಮುಂಚೆ ಪ್ರಸವವಾದರೆ, ಶಿಶುವನ್ನು ತಾಯಿಯ ಮಡಿಲಿನಲ್ಲಿಟ್ಟು, ವಿಧಿವತ್ತಾಗಿ ಈ ಸಂಸ್ಕಾರವನ್ನು ಮಾಡಬೇಕು. ಪೆಟ್ಟಿಗೆಯಲ್ಲಿಟ್ಟು ಮಾಡಬೇಕೆಂದು ಗಾರ್ಗ್ಯರ ಅಭಿಪ್ರಾಯ.

ಯದಿ ಸೀಮನ್ತತಃ ಪೂರ್ವಂ ಪ್ರಸೂಯೇತ ಕಥಂ ಚನ ।
ತದಾನೀಂ ಪೇಟಿಕೇ ಗರ್ಭಂ ಸ್ಥಾಪ್ಯ ಸಂಸ್ಕಾರಮಾಚರೇತ್ ॥

ಒಂದು ವೇಳೆ ಗಂಡನು ತೀರಿದ್ದರೆ, ಅಥವಾ ಬೇರೆ ದೇಶಕ್ಕೆ ಹೋಗಿದ್ದರೆ, ಮೈದುನನೋ, ಗುರುವೋ, ಅಥವಾ ಯಾರಾವರೂ ದಾಯಾದಿಗಳೋ ಈ ಕರ್ಮವನ್ನು ಮಾಡಬೇಕು. ಅಂತೂ ಬಿಡಕೂಡದೆಂಬುದು ಶಾಸ್ತ್ರದಲ್ಲಿ ಹೇಳಿರುವ ವಿಷಯ.

## ಜಾತಕರ್ಮ

ಮಗುವು ಹುಟ್ಟಿದೊಡನೆ, ತಂದೆಯು, ಹಗಲು, ರಾತ್ರಿ, ಅವೇಳೆಯೆಂದು ಲೆಕ್ಕಿಸದೇ, ಉಟ್ಟ ಬಟ್ಟೆಯೊಡನೆ, ತಣ್ಣೀರಿನಲ್ಲಿ ಸ್ನಾನಮಾಡಿ ಈ ಕರ್ಮವನ್ನು ಶಿಶುವಿಗೆ ಮಾಡಬೇಕು. ರಾತ್ರಿಯಾದರೂ ಸ್ನಾನಮಾಡಿ ದಾನಾದಿಗಳನ್ನು ಮಾಡಬೇಕು. ಅಭ್ಯುದಯ ಶ್ರಾದ್ಧವನ್ನು ಅನ್ನರೂಪದಲ್ಲಿ ಮಾಡಲೇ ಕೂಡದು. ಆಮಶ್ರಾದ್ಧ ಅಥವಾ ಹಿರಣ್ಯ ಶ್ರಾದ್ಧಗಳ ರೂಪವಾಗಿ ಮಾಡಬೇಕು.

ಯಾವನ್ನ ವಿದ್ಯತೇ ನಾಳಂ ತಾವನ್ನಾಪ್ನೋತಿ ಸೂತಕಂ ।
ಛಿನ್ನೇ ನಾಳೇ ತತಃ ಪಶ್ಚಾತ್ ಸೂತಕಂ ತು ವಿಧೀಯತೇ ॥

ಹೊಕ್ಕಳಿನ ಕುಡಿ ಕತ್ತರಿಸುವುದಕ್ಕೆ ಮುಂಚೆ ಸೂತಕಾಶೌಚವಿಲ್ಲ. ಅನಂತರವೇ ಅಶುಚಿ ಉಂಟಾಗುತ್ತದೆ. ಆದುದರಿಂದ ದಾನ, ಅಭ್ಯುದಯ ಶ್ರಾದ್ಧ ಮುಂತಾದವುಗಳಲ್ಲಿ ತಂದೆಗೆ ಅಧಿಕಾರವುಂಟು ಎಂದು ಬೈಜಾವಾಪರು ಹೇಳುತ್ತಾರೆ. ಒಂದು ವೇಳೆ ಒಡನೇ ಮಾಡಲು ಅನಾನುಕೂಲವಾರೆ, ಸೂತಕ ಕಳೆದ ನಂತರ ಈ ಕರ್ಮವನ್ನು ಮಾಡಬೇಕು. ಮೃತಾಶೌಚದಲ್ಲಿ ಮಗುವು ಹುಟ್ಟಿದರೆ ಆ ಆಶೌಚ ಕಳೆದ ಮೇಲೆ ಜಾತಕರ್ಮವನ್ನೂ ನಾಮಕರಣವನ್ನೂ ಮಾಡಬೇಕು. (ಆಶೌಚ ಬಂದರೂ ಕರ್ತೃವಿಗೆ ತಾತ್ಕಾಲಿಕ ಶುದ್ಧಿಯು ಉಂಟು. ಆಶೌಚ ಮಧ್ಯದಲ್ಲೂ ಮಾಡಬೇಕೆಂದು ಸ್ಮೃತ್ಯರ್ಥಸಾರದಲ್ಲಿ ಹೇಳಿದೆ.)

ವ್ಯಾಸಃ :—

ರಾತ್ರೌ ಸ್ನಾನಂ ನ ಕುರ್ವೀತ ದಾನಂ ಚೈವ ವಿಶೇಷತಃ ।
ನೈಮಿತ್ತಿಕಂ ತು ಕುರ್ವೀತ ಸ್ನಾನಂ ದಾನಂ ಚ ರಾತ್ರಿಷು ॥

"ರಾತ್ರಿಯಲ್ಲಿ ಸ್ನಾನವನ್ನೂ ದಾನವನ್ನೂ ಮಾಡಕೂಡದು. ಆದರೆ, ಮಗು ಹುಟ್ಟಿದರೆ, ಯಜ್ಞದ ಕೊನೆಯಾದ ಅವಭೃಥ ಸ್ನಾನವಾದರೆ, ಸಂಕ್ರಮಣ ಉಂಟಾದರೆ, ಗ್ರಹಣ ಸಂಭವಿಸಿದರೆ, ಸ್ನಾನವನ್ನು ದಾನವನ್ನೂ ಮಾಡಬೇಕು ಎಂದು ವ್ಯಾಸರು ಹೇಳುತ್ತಾರೆ. ಇವೆಲ್ಲಾ ಒಂದು ನಿಮಿತ್ತದಿಂದ ಬಂದವು—ನೈಮಿತ್ತಿಕವು.

ಸಾಂಖ್ಯಾಯನರು ರಾತ್ರಿ ಸ್ನಾನದಲ್ಲಿ ವಿಶೇಷವನ್ನು ಹೇಳುತ್ತಾರೆ.

ದಿವಾ ಮುದಾಹೃತಂ ತೋಯಂ ಕೃತ್ವಾ ಸ್ವರ್ಣಯುತಂ ತು ತತ್ ।
ರಾತ್ರಿಸ್ನಾನೇ ತು ಸಂಪ್ರಾಪ್ತೇ ಸ್ನಾಯೊದನಲ ಸನ್ನಿಧೌ ॥

ಇಂತಹ ನೈಮಿತ್ತಿಕ ಸ್ನಾನವು ಪ್ರಾಪ್ತವಾದರೆ ಹಗಲು ತಂದಿಟ್ಟ ನೀರಿಗೆ ಚಿನ್ನದ ಸಂಬಂಧವನ್ನುಂಟು–ಮಾಡಿ, ಬೆಂಕಿಯ ಹತ್ತಿರ ಸ್ನಾನ ಮಾಡಬೇಕೆಂದು ಸಾಂಖ್ಯಾಯನರೆಂಬ ಋಷಿಗಳು ಹೇಳುತ್ತಾರೆ.

ಆಹಿತಾಗ್ನಿಗಳು, ಹುಟ್ಟಿದ ಮಗುವು ಬ್ರಹ್ಮವರ್ಚಸ್ವಿಯಾಗಿ, ಅನ್ನದ ಸಂಪತ್ತು, ಪಶುಸಂಪತ್ತು ಇವೇ ಮೊದಲಾದವನ್ನು ಪಡೆಯಲು ಬಯಸಿದರೆ, ಅಮಾವಾಸ್ಯೆ ಅಥವಾ ಪೌರ್ಣಮಿ ಇವುಗಳಲ್ಲಿ ಜಾತೇಷ್ಟಿಯನ್ನು ಮಾಡಬಹುದು. ಆವಾಗಲೇ ಮಾಡಬೇಕೆಂಬ ನಿಯಮವಿಲ್ಲ.

## ನಾಮಕರಣ

**ಆಪಸ್ತಂಬಃ :—** "ದಶಮ್ಯಾಮುತ್ಥಿತಾಯಾಗ್ಂ ಸ್ನಾತಾಯಾಂ ಪುತ್ರಸ್ಯ ನಾಮ ದದಾತಿ ಪಿತಾಮಾತೇತಿ".

**ಉತ್ಥಿತಾಯಾಂ** = "ಹತ್ತನೆಯ ದಿವಸ; ಹೆರಿಗೆಯ ಮನೆಯಿಂದ ಹೊರಗೆ ಬಂದು ಸ್ನಾನಮಾಡಿ" ಎಂಬರ್ಥವಾಗುತ್ತದೆ. ಹನ್ನೊಂದನೆಯ ದಿನ ಸೂತಿಕಾ ಶುದ್ಧ್ಯರ್ಥವಾಗಿ ಸ್ನಾನವಿದ್ದೇ ಇದೆ. ನಾಮಕರಣ ಹತ್ತನೆಯ ದಿವಸವೇ ಮಾಡುವ ಸಂದರ್ಭದಲ್ಲಿ, ಹಿಂದೆ ಹೇಳಿದ ಸ್ನಾನ—ಸೂತ್ರರೀತಿಯಾಗಿ. ಆದರೆ ಅದು ಆಚಾರದಲ್ಲಿಲ್ಲ. ಹನ್ನೊಂದನೆಯ ದಿವಸವೇ ನಾಮಕರಣ ಮಾಡುವುದನ್ನು ನೋಡಿದ್ದೇವೆ. ಮನುವು, ಹತ್ತನೆಯ ದಿವಸ ಅಥವಾ ಹನ್ನೆರಡನೆಯ ದಿವಸ ಮಾಡಬೇಕೆನ್ನುತ್ತಾರೆ. ಬಹ್ವೃಚ ಪರಿಶಿಷ್ಟ ದಲ್ಲಿ, "ಜನನಾತ್ ದಶರಾತ್ರೇ, ಶತರಾತ್ರೇ ಸಂವತ್ಸರೇ ವಾ ನಾಮಕರಣಂ"—ಹತ್ತನೆಯ ದಿವಸ, ನೂರನೆಯ ದಿವಸ, ಅಥವಾ ಒಂದು ವರ್ಷದಲ್ಲಿ ನಾಮಕರಣ ಮಾಡಬೇಕೆಂದು ಹೇಳಿದೆ. ಈ ಕರ್ಮ ವನ್ನು ತಂದೆ ತಾಯಿಗಳಿಬ್ಬರೂ ಕೂಡಿ ಮಾಡಬೇಕು.

"ಮಮ ನಾಮ ಪ್ರಥಮಂ ಜಾತವೇದಃ ಪಿತಾ ಮಾತಾ ಚ
ದಧತುರ್ಯದಗ್ರೇ"

ಎಂದು ಶ್ರುತಿ ಹೇಳುತ್ತದೆ. ಬ್ರಾಹ್ಮಣನಿಗೆ 'ಶರ್ಮ' ಎಂಬ ಪದ ಕೊನೆಯುಳ್ಳದ್ದಾಗಿ ಹೆಸರಿಡಬೇಕು. ಕ್ಷತ್ರಿಯನಿಗೆ 'ವರ್ಮ', ವೈಶ್ಯನಿಗೆ 'ಗುಪ್ತ' ಮತ್ತು ಅಂತ್ಯಜನಿಗೆ 'ದಾಸ' ಎಂಬ ಪದಗಳು ಕೊನೆ ಯುಳ್ಳದ್ದಾಗಿ ಹೆಸರಿಡಬೇಕೆಂದು ಆಶ್ವಲಾಯನರು ಹೇಳುತ್ತಾರೆ.

ಹೆಣ್ಣು ಶಿಶುವಿಗೆ ವಿಷಮಾಕ್ಷರವಾದ ಹೆಸರನ್ನಿಡಬೇಕು. ಯಶೋದಾ, ಪಾರ್ವತೀ ಮುಂತಾದವು. ತಮ್ಮ ಗೃಹ್ಯಸೂತ್ರದಲ್ಲಿ ಹೇಳಿರುವ ರೀತಿಯಲ್ಲಿ ಕುಲಾಚಾರ—ಮನೆತನದ ಪದ್ಧತಿಯಂತೆ ವ್ಯವಸ್ಥೆ ನಾಮಕರಣ ಮಾಡಬೇಕು.

## ಕರ್ಣವೇಧನ (ಕಿವಿ ಚುಚ್ಚುವುದು)

ಕಾರ್ತಿಕ, ಪುಷ್ಯ, ಫಾಲ್ಗುನ, ಅಥವಾ ಚೈತ್ರಮಾಸಗಳಲ್ಲಿ, ಮಗುವಿಗೆ ಹಲ್ಲು ಹುಟ್ಟುವುದಕ್ಕೆ ಮುಂಚೆ, ತಾಯಿಯ ಮಡಿಲಲ್ಲಿಟ್ಟು, ಸೂಜಿಯಿಂದ ಕಿವಿ ಚುಚ್ಚುವ ಶಾಸ್ತ್ರವನ್ನು ಮಾಡಬೇಕು. ಕಿವಿ ಯನ್ನು ಚುಚ್ಚುವ ಸೂಜಿಯಲ್ಲಿ ಇಮ್ಮಡಿಯಾದ ದಾರವಿರಬೇಕು.

## ನಿಷ್ಕ್ರಮಣ (ಮನೆಯಿಂದ ಹೊರಕ್ಕೆ ಕರೆತರುವುದು)

ಮನುವು ಶಿಶುವಿಗೆ ನಾಲ್ಕನೇ ತಿಂಗಳಿನಲ್ಲಿ ಮನೆಯಿಂದ ನಿಷ್ಕ್ರಮಣ ಮಾಡಿಸಬೇಕೆನ್ನುತ್ತಾರೆ. ಹಾಗೆಯೇ ಸ್ಮೃತ್ಯರ್ಥಸಾರದಲ್ಲಿ ಸೂತ್ರ ಹೀಗಿದೆ; "ನಿಷ್ಕ್ರಮಣಂ ಚಂದ್ರಸೂರ್ಯದೇವತಾ ದರ್ಶನಂ ದ್ವಾದಶೇಽಹನಿ, ತೃತೀಯೇ, ಚತುರ್ಥೇಮಾಸಿ ಕುರ್ಯಾತ್."— ಮೂರು ಅಥವಾ ನಾಲ್ಕನೇ ತಿಂಗಳಿನ ಹನ್ನೆರಡನೇ ದಿನ ಮಗುವನ್ನು ಹೊರತಂದು ಚಂದ್ರಸೂರ್ಯರನ್ನು ತೋರಿಸಬೇಕು.

## ಅನ್ನಪ್ರಾಶನ

ಆಪಸ್ತಂಬಃ :— "ಜನ್ಮನೋಽಧಿ ಷಷ್ಠೇ ಮಾಸಿ ಬ್ರಾಹ್ಮಣಾನ್ ಭೋಜಯಿತ್ವಾ, ಆಶಿಷೋ ವಾಚಯಿತ್ವಾ, ದಧಿ ಮಧು ಘೃತಂ ಓದನಮಿತಿ ಸಗ್ಂ ಸೃಜ್ಯ, ಉತ್ತರೈರ್ಮಂತ್ರೈಃ ಕುಮಾರಂ ಪ್ರಾಶಯೇತ್"—ಹುಟ್ಟಿದ ದಿನ ಮೊದಲು ಮಾಡಿ, ಆರನೇ ತಿಂಗಳಿನಲ್ಲಿ, ಬ್ರಾಹ್ಮಣರಿಗೆ ಭೋಜನ ಮಾಡಿಸಿ, ಮಗುವಿಗೆ ಆಶೀರ್ವಾದ ಮಾಡಿಸಬೇಕು. ಮೊಸರು, ಜೇನುತುಪ್ಪ, ಅನ್ನ—ಇವನ್ನು ಚೆನ್ನಾಗಿ ಕಲೆಸಿ, ಮಂತ್ರಪೂರ್ವಕವಾಗಿ ತಿನ್ನಿಸಬೇಕು, ಎನ್ನುತ್ತಾರೆ. ಮನೆ ದೇವರ ಮುಂದೆ, ದಾದಿಯ ಮಡಿಲಿನಲ್ಲಿ ಅಲಂಕಾರ ಮಾಡಿದ ಮಗುವನ್ನಿಟ್ಟು ಚಿನ್ನದ ಪಾತ್ರೆಯಲ್ಲಿ ಅನ್ನವನ್ನಿಟ್ಟು ತಿನ್ನಿಸಬೇಕು. ಅನಂತರ, ಪಾಯಸವನ್ನು ಕುಡಿಸಬೇಕು. ಆಮೇಲೆ ದಾದಿಯು ಮಗುವನ್ನು ಮಡಿಲಿನಿಂದ ಇಳಿಸಬೇಕು, ಎಂದು ಮಾರ್ಕಂಡೇಯರು ಹೇಳುತ್ತಾರೆ.

ತಸ್ಯಾಗ್ರತೋಽಥ ವಿನ್ಯಸ್ಯ ಶಿಲ್ಪಭಾಂಡಾನಿ ಸರ್ವಶಃ ।
ಶಸ್ತ್ರಾಣಿ ಚೈವ ವಸ್ತ್ರಾಣಿ ತತಃ ಪಶ್ಯೇತ್ತು ಲಕ್ಷಣಂ ॥
ಪ್ರಥಮಂ ಯತ್ ಸ್ಪೃಶೇತ್ ಬಾಲಃ ತತೋ ಭಾಂಡಂ ಸ್ವಯಂ ತಥಾ ।
ಜೀವಿಕಾ ತಸ್ಯ ಬಾಲಸ್ಯ ತೇನೈವ ತು ಭವಿಷ್ಯತಿ ॥

ಮಗುವಿನ ಮುಂದೆ ವಿಧ ವಿಧವಾದ ಶಿಲ್ಪದ ಸಾಮಾನುಗಳು— ಮಡಿಕೆ, ಕುಡಿಕೆ,—ಹಣ್ಣು, ಕತ್ತಿ, ಗುರಾಣಿ, ಬಟ್ಟೆ, ಪುಸ್ತಕ ಮುಂತಾದವು—ಇವನ್ನು ಇಡುವುದು. ಮೊದಲು ಆ ಆಟದ ಸಾಮಾನುಗಳಲ್ಲಿ ಯಾವುದನ್ನು ಮಗುವು ಮುಟ್ಟುವುದೋ ಅದೇ ಅದರ ಜೀವಿಕೆ—ಬದುಕುವ ದಾರಿ—ಎಂದು ತಿಳಿಯ ಬಹುದು, ಎಂದು ಹೇಳುತ್ತಾರೆ

## ಚೂಡಾಕರಣ (ಜುಟ್ಟು ಬಿಡಿಸುವುದು)

ಮನುಃ :— ಚೂಡಾಕರ್ಮ ದ್ವಿಜಾತೀನಾಂ ಸರ್ವೇಷಾಮೇವ ಧರ್ಮತಃ ।
ಪ್ರಥಮೇಽಬ್ದೇ ತೃತೀಯೇ ವಾ ಕರ್ತವ್ಯಂ ಶ್ರುತಿ ಚೋದನಾತ್ ॥

ಎಲ್ಲಾ ದ್ವಿಜರಿಗೂ, ಕುಲಧರ್ಮಕ್ಕೆ ಅನುಸಾರವಾಗಿ, ಮೊದಲನೆಯ ವರ್ಷ, ಅಥವಾ ಮೂರನೆಯ ವರ್ಷ ಚೂಡಾಕರ್ಮ = ಜುಟ್ಟನ್ನು ಬಿಡಿಸುವ ಕಾರ್ಯವನ್ನು ಮಾಡಬೇಕು.

"ಯತ್ರ ಬಾಣಾಸ್ಸಂಪತನ್ತಿ ಕುಮಾರಾ ವಿಶಿಖಾ ಇವ" (ಸಂ. ೬—೪—೨೦) ಎಂದು ವೇದದಲ್ಲಿ ಹೇಳಿದೆ. ಆದುದರಿಂದ ವೇದಪ್ರೋಕ್ತವಾದ ಈ ಕರ್ಮವನ್ನು ಅವಶ್ಯವಾಗಿ ಮಾಡಬೇಕೆಂದಾಯಿತು.

"ಮುಂಡಿತವಾದ (ಕ್ಷೌರಮಾಡಲ್ಪಟ್ಟ) ತಲೆಯುಳ್ಳ ಬಾಲರು, ಚಾಪಲ್ಯದಿಂದ ಇತ್ತ—ಅತ್ತ ಹೇಗೆ

ಹೋಗುತ್ತಾರೋ ಹಾಗೆ, ಯುದ್ಧದಲ್ಲಿ ಶತ್ರುಗಳಿಂದ ಬಿಡಲ್ಪಟ್ಟ ಬಾಣಗಳು ಬೀಳುತ್ತವೆ." ಎಂದು ಆ ವೇದಭಾಗದ ಅರ್ಥ.

ಆಪಸ್ತಂಬರು "ಯಥರ್ಷಿ ಶಿಖಾನಿ ದಧಾತಿ– ಯಥಾ ವೈಷಾಂ ಕುಲಧರ್ಮಸ್ಸ್ಯಾತ್" ಎಂದು ಸೂತ್ರವಾಗಿ ಹೇಳಿದ್ದಾರೆ. ತಂತಮ್ಮ ಪ್ರವರದಲ್ಲಿ ಎಷ್ಟೆಷ್ಟು ಋಷಿಗಳಿದ್ದಾರೋ ಅಷ್ಟಷ್ಟು ಜುಟ್ಟನ್ನು ಧರಿಸಬೇಕು. ಒಬ್ಬನೇ ಋಷಿಯಿದ್ದರೆ ಒಂದು ಶಿಖೆ, ಎರಡು ಋಷಿಗಳಿದ್ದರೆ ಎರಡು ಶಿಖೆ, ಹೀಗೆ, ಅಥವಾ ಆ ಮನೆತನದವರು ಹೇಗೆ ಪರಂಪರೆಯಾಗಿ ಧರಿಸುತ್ತಾ ಬರುತ್ತಾರೋ ಹಾಗೇ ಧರಿಸಬೇಕು ಎನ್ನುತ್ತಾರೆ. ತಾಯಿಯು ಗರ್ಭಿಣಿಯಾಗಿದ್ದರೆ ಆವಾಗ ಮಗುವಿಗೆ ಈ ಕರ್ಮವನ್ನು ಮಾಡಕೂಡದು. ಹುಟ್ಟಿದ ದಿನದಿಂದ ಲೆಕ್ಕಿಸಿ ಮೂರುವರೆ ವರ್ಷವಾಗಿದ್ದರೆ, ಪುನರ್ವಸು ಮುಂತಾದ ಶುಭನಕ್ಷತ್ರದಲ್ಲಿ ಈ ಕಾರ್ಯವನ್ನು ಮಾಡಬೇಕು. ಹುಟ್ಟಿದ ನಕ್ಷತ್ರದಲ್ಲಿ ಕೂಡದು.

## ಸ್ತ್ರೀಯರಿಗೆ ಜಾತಕರ್ಮಾದಿ

ಜಾತಕರ್ಮವನ್ನು ಮೊದಲು ಮಾಡಿ ಚೂಡಾಕರಣದವರೆಗೂ ಇರುವ ಕರ್ಮಗಳನ್ನು ಹೆಂಗಸರಿಗೆ ಅಮಂತ್ರಕವಾಗಿ ಮಾಡಬೇಕು. ವಿವಾಹ ಮಾತ್ರ ಮಂತ್ರದೊಡನೆ. ಅದೇ ಉಪನಯನ ಎಂದು ಮನುವು ಹೇಳುತ್ತಾರೆ.

ವೈವಾಹಿಕೋ ವಿಧಿಃ ಸ್ತ್ರೀಣಾಂ ಔಪನಾಯನಿಕಃ ಸ್ಮೃತಃ ।
ಪತಿಸೇವಾ ಗುರೌ ವಾಸೋ ಗೃಹಾರ್ಥೋಽಗ್ನಿ ಪರಿಕ್ರಿಯಾ ॥

ಪತಿಶುಶ್ರೂಷೆಯೇ ಗುರುಕುಲವಾಸ. ಮನೆಯ ಕೆಲಸ ಮಾಡುವುದೇ ಅಗ್ನಿಪರಿಚರ್ಯೆ–ಅಗ್ನಿಕಾರ್ಯ. ಈ ವಿಷಯದಲ್ಲಿ ಹಾರೀತರು ಹೀಗೆ ಹೇಳುತ್ತಾರೆ. ಬ್ರಹ್ಮವಾದಿ, ಸದ್ಯೋವಧು ಎಂದು ಹೆಂಗಸರಲ್ಲಿ ಎರಡು ವಿಧವುಂಟು. ಬ್ರಹ್ಮವಾದಿಗಳಿಗೆ ಉಪನಯನ, ಅಗ್ನಿಕಾರ್ಯ, ವೇದಾಧ್ಯಯನ ಮತ್ತು ತಮ್ಮ ತಮ್ಮ ಮನೆಗಳಲ್ಲಿಯೇ ಭಿಕ್ಷೆ ಬೇಡುವುದು —ಇವೆಲ್ಲಾ ಉಂಟು. ಸದ್ಯೋವಧುಗಳಿಗೆ ಹೇಗೋ ಉಪನಯನ ವನ್ನು ಮಾಡಿ ವಿವಾಹವನ್ನು ಮಾಡಬೇಕು—ಎಂದು. ಇದು ಬೇರೆ ಕಲ್ಪದಲ್ಲಿದ್ದ ವಿಷಯ.

ಪುರಾಕಲ್ಪೇ ಕುಮಾರೀಣಾಂ ಮೌಂಜೀಬಂಧನಮಿಷ್ಯತೇ ।
ಅಧ್ಯಾಪನಂ ಚ ವೇದಾನಾಂ ಸಾವಿತ್ರೀ ವಚನಂ ತಥಾ ॥

ಹಿಂದಿನ ಕಲ್ಪದಲ್ಲಿ, ಹುಡುಗಿಯರಿಗೆ, ಮೌಂಜಿಯನ್ನು ಕಟ್ಟಿಕೊಳ್ಳುವುದು, ವೇದವನ್ನು ಕಲಿಯುವುದು, ಗಾಯತ್ರೀ ಜಪ ಇವೆಲ್ಲಾ ಇದ್ದುವು. ತಂದೆ ಮತ್ತು ಅವನ ಸಹೋದರರು ಇವಳಿಗೆ ವೇದವನ್ನು ಹೇಳಿಕೊಡಬೇಕು. ಇತರರ ಹತ್ತಿರ ಇವಳು ಕಲಿಯಕೂಡದು. ಕೃಷ್ಣಾಜಿನ, ನಾರುಮಡಿ ಜಟೆಯನ್ನು ಧರಿಸುವುದು ಇವೆಲ್ಲಾ ಕೂಡದು–ಎಂದು ಯಮಲರೆಂಬುವರು ಹೇಳುತ್ತಾರೆ. ಈ ಸಂಸ್ಕಾರಗಳನ್ನೆಲ್ಲ ಬೀಜ ಗರ್ಭದೋಷ ನಿವೃತ್ತಿಗಾಗಿ ಮಾಡತಕ್ಕದ್ದು. ಹೆಂಗಸರಿಗೆ ಮಂತ್ರವಿಲ್ಲದೆ ಮಾಡಬೇಕು. ವಿವಾಹ ಮಾತ್ರ ಮಂತ್ರಪೂರ್ವಕವಾಗಿ, ಆ ಆ ಕಾಲಗಳಲ್ಲಿ ಮಾಡದಿದ್ದರೆ ಕೃಚ್ಛ್ರವನ್ನು ಆಚರಿಸಿ ಪ್ರಾಯಶ್ಚಿತ್ತ ಹೋಮವನ್ನು ಮಾಡಿ, ಮಾಡಬೇಕು. ಬುದ್ಧಿ ಪೂರ್ವಕವಾಗಿ ತಡ ಮಾಡಿದರೆ ಇಮ್ಮಡಿಯಾದ ಕೃಚ್ಛ್ರಾಚರಣ.

## ಅಕ್ಷರಾಭ್ಯಾಸ

ಕುಂಭಮಾಸ ಬಿಟ್ಟು, ಉತ್ತರಾಯಣದಲ್ಲಿ, ಮಗುವಿನ ಐದನೆಯ ವರ್ಷದಲ್ಲಿ ವಿದ್ಯಾರಂಭವನ್ನು ಮಾಡಬೇಕು. ಪಾಡ್ಯ, ಷಷ್ಠಿ, ಅಷ್ಟಮಿ, ಚತುರ್ದಶೀ, ಹುಣ್ಣಿಮೆ ಮತ್ತು ಅಮಾವಾಸ್ಯೆ ಈ ದಿನಗಳಲ್ಲೂ. ಭಾನು, ಮಂಗಳ ಈ ವಾರಗಳಲ್ಲೂ ಮಾಡಕೂಡದು. ಲಕ್ಷ್ಮೀ, ನಾರಾಯಣ, ಸರಸ್ವತೀ, ತನ್ನ ಸೂತ್ರಕಾರರು ಇವರನ್ನು ಪೂಜಿಸಿ, ಪ್ರಾಙ್ಮುಖವಾಗಿ ತಾನು ಕುಳಿತು, ಪಶ್ಚಿಮಾಭಿಮುಖವಾಗಿ ಶಿಶುವನ್ನು ಕೂರಿಸಿ, ಉಪದೇಶವನ್ನು ಮಾಡಬೇಕು. (ಮಡಿಲಿನಲ್ಲಿ ಮಗುವನ್ನು ಕೂರಿಸಿಕೊಂಡು, ಅಕ್ಷರಾಭ್ಯಾಸವನ್ನು ಮಾಡಿಸುವುದು ಶಿಷ್ಟಾಚಾರವಾಗಿದೆ.)

ಎಂಟು ವರ್ಷವಾಗುವವರೆಗೂ ಶಿಶುವು ಗರ್ಭದಲ್ಲಿದ್ದರೆ, ಆ ಕಾಲದಲ್ಲಿ "ಇದನ್ನು ತಿನ್ನತಕ್ಕದ್ದು, ಇದು ಕುಡಿಯ ತಕ್ಕದು, ಇದು ಅಲ್ಲ" ಎಂಬ ನಿಯಮವಿಲ್ಲ ಎಂದು ದಕ್ಷರು ಹೇಳುತ್ತಾರೆ.

ಭಕ್ಷ್ಯಾಭಕ್ಷ್ಯ ತಥಾ ಪೇಯೇ ವಾಚ್ಯಾವ್ಯಾಚ್ಯೇ ತಥಾನೃತೇ ।
ಅಸ್ಮಿಂಕಾಲೇ ನ ದೋಷಃ ಸ್ಯಾತ್ ಸ ಯಾವನ್ನೋಪನೀಯಂತೇ ॥

ಪ್ರೇತಕಾರ್ಯದಲ್ಲಿ ಅನುಪನೀತನಿಗೂ ಮಂತ್ರವನ್ನು ಹೇಳುವುದು ದೋಷವಲ್ಲ. "ಪಿತ್ರೋಃ ಸ್ವಧಾನಿನಯನಾದೃತೇ ಚ ಮಂತ್ರಾನ್ ನ ಬ್ರೂಯುಃ" ಎಂದು ಆಪಸ್ತಂಬರು ಹೇಳಿರುವರು. (ಸ್ವಧಾನಿನಯೇನಂ = ಪ್ರೇತಕರ್ಮ.) ಅದನ್ನು ಬಿಟ್ಟು ಬೇರೆ ಮಂತ್ರವನ್ನು ಹೇಳಕೂಡದು. ಅನ್ನಪ್ರಾಶನಕ್ಕೆ ಮುಂಚೆ ಇತರರ ಮುಟ್ಟುವಿಕೆ ಉಂಟಾದರೆ ಶಿಶುವಿಗೆ ನೀರನ್ನು ಪ್ರೋಕ್ಷಿಸಿದರೆ ಶುದ್ಧಿ.

## ಉಪನಯನಮ್

ಗರ್ಭವನ್ನು ಆರಂಭಿಸಿ ಎಂಟನೇ ವರ್ಷದಲ್ಲಿ ಉಪನಯನವನ್ನು ಬ್ರಾಹ್ಮಣನಿಗೆ ಮಾಡಬೇಕು. ಹನ್ನೊಂದನೆಯ ವರ್ಷ ಕ್ಷತ್ರಿಯನಿಗೂ, ಹನ್ನೆರಡನೆಯ ವರ್ಷ ವೈಶ್ಯನಿಗೂ, ಮಾಡಬೇಕು. ಬ್ರಾಹ್ಮಣನಿಗೆ ವಸಂತ ಋತುವಿನಲ್ಲೂ ರಾಜನಿಗೆ ಗ್ರೀಷ್ಮದಲ್ಲೂ, ವೈಶ್ಯರಿಗೆ ವರ್ಷಋತುವಿನಲ್ಲೂ ಮಾಡಬೇಕು. (ಪ್ರಶಸ್ತ)

ವಿಪ್ರಂ ವಸನ್ತೇ ಕ್ಷಿತಿಪಂ ನಿದಾಘೇ
ವೈಶಂ ಘನಾನ್ತೇ ವ್ರತಿನಂ ವಿದಧ್ಯಾತ್ ॥

ಎಂದು ಧರ್ಮಸಾರ ಸುಧಾನಿಧಿಯಲ್ಲಿ ಹೇಳಿದೆ. ಮಾಘಾದಿ ಐದು ತಿಂಗಳೂ ಪ್ರಶಸ್ತ ಎಂದೂ ಜ್ಯೋತಿಃ ಶ್ಯಾಸ್ತ್ರ ಹೇಳುತ್ತದೆ.

ತಾಯಿಯು ಮಗುವಿಗೆ ಜನ್ಮವನ್ನು ಕೊಡುತ್ತಾಳೆ. ಎರಡನೇ ಜನ್ಮ ಉಪನಯನ ಸಂಸ್ಕಾರದಿಂದ. ಆದುದರಿಂದಲೇ ಈ ತ್ರೈವರ್ಣಿಕರು ದ್ವಿಜರಾದರು—ಎರಡು ಸಲ ಹುಟ್ಟಿದರು ಎನಿಸಿದರು. "ಸ ಹಿ ವಿದ್ಯಾತಃ ತಂ ಜನಯತಿ ತತ್ ಶ್ರೇಷ್ಠಂ ಜನ್ಮ, ಶರೀರಮೇವ ಮಾತಾ ಪಿತರೌ ಜನಯತಃ" ಎಂದು ಆಪಸ್ತಂಬರು ಹೇಳುತ್ತಾರೆ. ತಂದೆ ತಾಯಿಗಳು ಶರೀರದ ಉತ್ಪತ್ತಿಗೆ ಕಾರಣರು. ಆದರೆ ಉಪನಯನ ಸಂಸ್ಕಾರ ಮಾಡಿದವನು ಆಚಾರ್ಯನೆನಿಸುತ್ತಾನೆ. ಎಲ್ಲಾ ವೇದದ ಸ್ವರೂಪವಾದ ಸಾವಿತ್ರಿಯನ್ನು ಪ್ರದಾನ ಮಾಡಿರುತ್ತಾನಾಗಿ ಆಚಾರ್ಯನಾಗಿ, ಗಾಯತ್ರಿಯನ್ನುಪದೇಶಿಸಿ, ಬೇರೆ ಜನ್ಮವನ್ನೇ ಇತ್ತಿದ್ದಾನೆ. ಹದಿನಾರು ವರ್ಷಗಳೊಳಗೆ ಈ ಉಪನಯನ ಸಂಸ್ಕಾರ ಆಗಬೇಕು.

ಇಲ್ಲದಿದ್ದರೆ ವ್ರಾತ್ಯನಾಗುತ್ತಾನೆ (ಪತಿತನಾಗುತ್ತಾನೆ). ಅಂತಹವನಿಗೆ ಪ್ರಾಯಶ್ಚಿತ್ತಗಳನ್ನು ಮಾಡದೇ ಇದ್ದರೆ, ಅಧ್ಯಯನ, ಅಧ್ಯಾಪನ, ಕನ್ಯಾದಾನ, ಪ್ರತಿಗ್ರಹ ಮೊದಲಾದುವುಕ್ಕೆ ಅವನು ಅರ್ಹನಾಗುವುದಿಲ್ಲ.

ಈ ರೀತಿ ಉಪನಯನವಾದವನು ಗುರುಕುಲವಾಸಮಾಡಿ, ವೇದವ್ರತವನ್ನು ಮಾಡಿ, ವೇದವನ್ನು ಅಭ್ಯಾಸ ಮಾಡಬೇಕು. "ವೇದವ್ರತಾನಿ ಕುರ್ವೀತ । ತತೋ ವೇದಂ ಸಮಭ್ಯಸೇತ್ ।" ಎಂದು ವಿಧಿ ಇದೆ. ಸಾಂಗ ವೇದಾಧ್ಯಯನ ಮಾಡಿ, ಗುರುದಕ್ಷಿಣೆಯನ್ನು ಕೊಟ್ಟು, ಅನುರೂಪಳಾದ ಕನ್ಯೆಯನ್ನು ಪರಿಗ್ರಹಿಸಬೇಕು. ಅವಳೊಡನೆ ಗಾರ್ಹಸ್ಥ್ಯ ಧರ್ಮದಲ್ಲಿದ್ದು, ಪಂಚಮಹಾಯಜ್ಞಾದಿಗಳನ್ನು ಮಾಡುತ್ತಿದ್ದರೆ ಸಕಲ ಶ್ರೇಯಸ್ಸುಂಟಾಗುತ್ತದೆ. ಗೃಹಸ್ಥನಾಗಲು ಅಪೇಕ್ಷೆಯಿಲ್ಲದಿದ್ದರೆ ಸಂನ್ಯಾಸವನ್ನು ಪಡೆದು ಬ್ರಹ್ಮಧ್ಯಾನವಲ್ಲಿರಬೇಕು.

ಇತಿ ಶಂ

"ವೇದಮಾರ್ತಾಂಡ," ಸಾಹಿತ್ಯ ವೇದವೇದಾಂತ ವಿದ್ವಾನ್, ಪಂಡಿತ
**ಶೇಟ್ಲೂರ ಶ್ರೀನಿವಾಸ ರಂಗಾಚಾರ್ಯರು**
ಶ್ರೀರಂಗಂ ಶ್ರೀಮದಾಂಡವನ್ ಪೆರಿಯಾಶ್ರಮದ
ಆಸ್ಥಾನ ವಿದ್ವಾನ್,
ಬೆಂಗಳೂರು



ಯಸ್ಯ ತ್ರೀ ಪೂರ್ಣಾ ಮಧುನಾ
ಪದಾನ್ಯಕ್ಷೀಯಮಾಣಾ ಸ್ವಧಯಾ ಮದನ್ತಿ ।
ಯ ಉ ತ್ರಿಧಾತು ಪೃಥಿವೀಮುತ ದ್ಯಾಂ
ಏಕೋ ದಾಧಾರ ಭುವನಾನಿ ವಿಶ್ವಾ ॥
(ಯ. ಸಂ. ೧-೧-೫೪-೪)

"ಯಾವ ಶ್ರೀ ಮಹಾವಿಷ್ಣುವಿನ ಪ್ರಸಿದ್ಧವಾದ ಮೂರು ಪಾದಗಳು ಜೇನಿನೊಡನೆ (ಅಮೃತದೊಡನೆ) ತುಂಬಿ, ನಾಶರಹಿತವಾಗಿರುವುವೋ, ಅವು, ಭಕ್ತರಿಗೆ ಅನ್ನಸಮೃದ್ಧಿಯಿಂದ ಆನಂದದನ್ನು ಬೆಳೆಸತಕ್ಕವಾಗಿವೆ. (ಆದ್ದರಿಂದಲೇ) ವಿಷ್ಣುವು ತ್ರಿಧಾತುವೆನಿಸಿ, ತಾನೊಬ್ಬನೇ ಭೂಮಿಯನ್ನೊಳಗೊಂಡಂತೆ, ಕೆಳಗಿನ ಮತ್ತು ಮೇಲಿನ ಎಲ್ಲ (ಹದಿನಾಲ್ಕು) ಲೋಕಗಳನ್ನೂ ಎತ್ತಿ ಹಿಡಿದಿದ್ದಾನೆ."

# ಋಷಿಗಳ ರಾಷ್ಟ್ರಾಭಿಮಾನ

ರಾಷ್ಟ್ರ ಎಂಬ ಶಬ್ದ ಪ್ರಾಂತ, ದೇಶ, ರಾಜ್ಯ—ಎಂಬ ಶಬ್ದಗಳಿಗಿಂತ ಹೆಚ್ಚು ವ್ಯಾಪಕವಾದ ಅರ್ಥವನ್ನು ಕೊಡುತ್ತದೆ. ರಾಷ್ಟ್ರದಲ್ಲಿ ಪ್ರಾಂತ, ದೇಶ, ರಾಜ್ಯಗಳು ಅಡಕವಾಗುತ್ತವೆ. ಕರ್ನಾಟಕ ಪ್ರಾಂತ, ಕರ್ನಾಟಕ ದೇಶ, ಕರ್ನಾಟಕ ರಾಜ್ಯ ಎಂದು ಹೇಳಬಹುದು. ಆದರೆ ಕರ್ನಾಟಕ ರಾಷ್ಟ್ರ ಎನ್ನಲಾಗುವುದಿಲ್ಲ. ಒಂದೇ ಬಗೆಯ ಸಂಸ್ಕೃತಿ, ವಿಚಾರ ಶೀಲತೆ, ಆಶೋತ್ತರಗಳಿಂದ ಕೂಡಿದ ಪ್ರಜಾಸಮುದಾಯವಿರುವ ಮತ್ತು ರಾಜಕೀಯವಾಗಿ ಒಂದು ಆಡಳಿತಕ್ಕೆ ಒಳಪಟ್ಟ ಭೂಖಂಡವನ್ನು ಸಾಮಾನ್ಯವಾಗಿ ರಾಷ್ಟ್ರ ಎನ್ನಬಹುದು. ರಾಜಕೀಯವಾದ ಏಕತೆಗಿಂತ ಸಂಸ್ಕೃತಿ, ವಿಚಾರಗಳ ಏಕತೆಯೇ ಮುಖ್ಯ-ವಾದುದು. ನಮ್ಮೀ ಭರತಖಂಡದಲ್ಲಿ ಹಿಂದೆ ಹಲವಾರು ಸ್ವತಂತ್ರ ರಾಜರುಗಳು ಆಳುತ್ತಿದ್ದರೂ ಭರತಖಂಡ ಒಂದೇ ರಾಷ್ಟ್ರವೆನಿಸಿತ್ತು. ಭಾಷಾ ಬೇಧಗಳೂ ಸಹ ಏಕರಾಷ್ಟ್ರವೆಂಬ ವಿಶ್ವಾಸಕ್ಕೆ ಭಂಗವನ್ನು ತರಲಿಲ್ಲ. ಏಕೆಂದರೆ, ಕನ್ಯಾಕುಮಾರಿಯಿಂದ ಹಿಮಾಲಯದವರೆಗೆ ವ್ಯಾಪಿಸಿದ್ದ ನಾನಾ ರಾಜ್ಯಗಳ ಜನರ ಸಂಸ್ಕೃತಿ, ವಿಚಾರ, ನಂಬಿಕೆ ಇವುಗಳಲ್ಲಿ ಏಕಸೂತ್ರತೆ ಸ್ಥಿರವಾಗಿ ನೆಲೆಸಿತ್ತು. ಇವುಗಳಿಗೆ ಮುಖ್ಯವಾಗಿ ವೇದವಾಙ್ಮಯದ ಮಹಿಮೆ, ಪ್ರಭಾವ, ವ್ಯಾಪ್ತಿಗಳು ಕಾರಣ. ಅಂತೆಯೇ ವೇದಾಂಗಗಳ ಅಧ್ಯಯನ, ವೈದಿಕ ದರ್ಶನಗಳ ಹರವು ಪ್ರಧಾನ ಪಾತ್ರವನ್ನು ವಹಿಸುತ್ತವೆ, ಅಲ್ಲದೆ ಭರತ ಖಂಡದ ವಿಭಿನ್ನ ಪ್ರಾಂತಗಳನ್ನು ಮುತ್ತುಗಳಂತೆ ಪೋಣಿಸಿ ಏಕಸೂತ್ರತೆಯಲ್ಲಿ ಶಾಶ್ವತವಾಗಿ ಹಿಡಿದಿಟ್ಟ ಕೀರ್ತಿ ಸಂಸ್ಕೃತ ಭಾಷೆಗೆ ಸಲ್ಲುತ್ತವೆ.

ಬರಿಯ ನೆಲ, ಬೆಟ್ಟ, ಕಾಡುಗಳು ರಾಷ್ಟ್ರವೆನಿಸುವುದಿಲ್ಲ. ಅಲ್ಲಿ ನೆಲೆಸಿರುವ ಪ್ರಜಾಸಮುದಾಯವೇ ರಾಷ್ಟ್ರದ ಜೀವಾತು. ಮುಂದುವರಿದ ರಾಷ್ಟ್ರ, ಹಿಂದುಳಿದ ರಾಷ್ಟ್ರ ಎನ್ನುವಾಗ ಅಲ್ಲಿರುವ ಪ್ರಜೆಗಳನ್ನು ಅನುಲಕ್ಷಿಸಿ ಹೀಗೆ ಹೇಳುತ್ತೇವೆ. ಬರಿಯ ನೆಲ ಮುಂದುವರಿದದ್ದೂ ಅಲ್ಲ, ಹಿಂದೂಳಿದದ್ದೂ ಅಲ್ಲ. ಆದರೆ ರಾಷ್ಟ್ರದ ಎಲ್ಲೆಕಟ್ಟು ಎನ್ನುವಾಗ ವಿಶಿಷ್ಟ ಪ್ರಜೆಗಳು ನೆಲೆಸಿರುವ ನೆಲವೆಂದು ಅರ್ಥ. ಆದ್ದರಿಂದ ಒಂದೇ ಬಗೆಯ ಧ್ಯೇಯವುಳ್ಳ ಅಥವಾ ಸಮಾನ ಸಂಸ್ಕೃತಿಯುಳ್ಳ ಸಮುದಾಯವು ನೆಲೆಸಿರುವ ನೆಲವನ್ನು ಒಂದು ರಾಷ್ಟ್ರವೆಂದು ತಿಳಿಯಬಹುದು. ಜನಪದ ಎಂಬ ಇನ್ನೊಂದು ಶಬ್ದ ರಾಷ್ಟ್ರ ಎಂಬ ಅರ್ಥದಲ್ಲಿ ಬಳಸಬಹುದಾದದ್ದು.

ನಮ್ಮ ರಾಷ್ಟ್ರಕ್ಕೆ ಭರತಖಂಡ, ಭಾರತ ವರ್ಷ—ಎಂಬ ಹೆಸರುಗಳಿದ್ದುದಾಗಿ ಪ್ರಾಚೀನ ಗ್ರಂಥಗಳಿಂದ ತಿಳಿದು ಬರುತ್ತದೆ. ಪ್ರತಿಯೊಂದು ನಿತ್ಯ ವಿಧಿಯಲ್ಲಿಯೂ ನಮ್ಮವರು 'ಭರತಖಂಡೇ ಭಾರತ-ವರ್ಷೇ,......ಮಂಡಲೇ,.......ದೇಶೇ' ಎಂದು ಸಂಕಲ್ಪಿಸುವುದು ಇಂದಿಗೂ ಕಂಡು ಬರುತ್ತದೆ. ಭರತಖಂಡ–ಭಾರತ ವರ್ಷಗಳಿಗಿರುವ ಭೇದವೇನೆಂಬುದನ್ನು ವಿದ್ವಾಂಸರು ನಿಶ್ಚಯಿಸಬೇಕಾಗಿದೆ. ವಿಷ್ಣುಪುರಾಣದಲ್ಲಿ—

ಉತ್ತರಂ ಯತ್ ಸಮುದ್ರಸ್ಯ ಹಿಮಾದ್ರೇಶ್ಚೈವ ದಕ್ಷಿಣಂ ।
ವರ್ಷಂ ತದ್ ಭಾರತಂ ನಾಮ ಭಾರತೀ ಯತ್ರ ಸಂತತಿಃ ॥

ಎಂದು ಹೇಳಿದೆ (೨–೩–೧) "ಸಮುದ್ರಕ್ಕೆ ಉತ್ತರದಲ್ಲಿ, ಹಿಮಾಲಯ ಪರ್ವತಕ್ಕೆ ದಕ್ಷಿಣದಲ್ಲಿ ಇರುವ ಜನಪದವೇ ಭಾರತವರ್ಷ" ಎಂದು ಇದರ ಅಭಿಪ್ರಾಯ. ಸ್ಥೂಲವಾಗಿ ಇದನ್ನು ನಾವೀಗ 'ಇಂಡಿಯಾ

ದೇಶ' ಎಂದು ಕರೆಯುತ್ತಿದ್ದೇವೆ. ಭರತಖಂಡ ಎನ್ನುವುದು ಭಾರತವರ್ಷಕ್ಕಿಂತ ವ್ಯಾಪಕವಾದ ಪ್ರದೇಶವ-ನ್ನೊಳಗೊಂಡಿದ್ದರೆ ಮಾತ್ರ ಮೇಲ್ಕಂಡ ಸಂಕಲ್ಪ ಸ್ವರಸವಾಗುತ್ತದೆ. ನಾವೀಗ ಭಾರತದೇಶ ಎನ್ನುವುದಂ ಭಾರತರಾಷ್ಟ್ರ ಎಂಬ ಅರ್ಥದಲ್ಲಿ. ಆದ್ದರಿಂದ ಇದರ ಅಧ್ಯಕ್ಷರನ್ನು 'ರಾಷ್ಟ್ರಪತಿ' ಎನ್ನುವುದು ಸರಿ.

ಈಗ ಎಲ್ಲ ರಾಷ್ಟ್ರಗಳಲ್ಲಿಯೂ ರಾಷ್ಟ್ರಗೀತೆಯೆಂಬುದು ಪ್ರಸಿದ್ಧವಾಗಿದೆ. ಹಿಂದೆ ಭಾರತದಲ್ಲಾಳಿದ ಯಾವ ರಾಜರೂ ರಾಷ್ಟ್ರಗೀತೆಯನ್ನು ಗೊತ್ತುಮಾಡಿಕೊಂಡಂತೆ ಕಾಣುವುದಿಲ್ಲ. ಆದರೆ ರಾಜರುಗಳಿಗೆ ಗೊತ್ತಾದ ಚಿಹ್ನೆಯು ಧ್ವಜವಿತ್ತು. ಇದಕ್ಕೆ ನಮಗೆ ಇತಿಹಾಸದಲ್ಲಿ ದಾಖಲೆ ಸಿಗುತ್ತದೆ. ಈಗ ನಮ್ಮ ರಾಷ್ಟ್ರಧ್ವಜದಲ್ಲಿರುವ ಸಿಂಹಾಂಕಿತವಾದ ಚಕ್ರವು ಅಶೋಕ ಚಕ್ರವರ್ತಿಯ ರಾಜ್ಯ ಚಿಹ್ನೆಯಾಗಿತ್ತು. ವಿಜಯನಗರದ ಅರಸರಿಗೆ ವರಾಹವು ಅಧಿಕೃತ ಚಿಹ್ನೆಯಾಗಿತ್ತು. ದಶರಥನ ಧ್ವಜದಲ್ಲಿ ಕೋವಿದಾರ ವೃಕ್ಷವೂ ಯುಧಿಷ್ಠಿರನ ಧ್ವಜದಲ್ಲಿ ಮೃದಂಗವೂ ರಾಜಚಿಹ್ನೆಗಳಾಗಿದ್ದವೆಂದು ರಾಮಾಯಣ, ಮಹಾಭಾರತಗಳಿಂದ ತಿಳಿದು ಬರುತ್ತದೆ. ವಿಶೇಷ ಸಂದರ್ಭಗಳಲ್ಲಿ ಅವರು ರಾಷ್ಟ್ರಗೀತೆಯನ್ನು ನುಡಿಸುತ್ತಿದ್ದರೆಂಬುದಕ್ಕೆ ಆಧಾರವೇನು ಇದ್ದಂತೆ ಕಾಣುವುದಿಲ್ಲ.

ಭಾರತವರ್ಷದ ಎಲ್ಲೆಯನ್ನು ಗುರುತಿಸಿದ ವಿಷ್ಣುಪುರಾಣವು ರಾಷ್ಟ್ರಪ್ರೇಮಾತಿಶಯದಿಂದ ಹೇಳುತ್ತದೆ. "ಅತ್ರಾಪಿ ಭಾರತಂ ಶ್ರೇಷ್ಠಂ" ಎಂದು. ಅದೇ ಪುರಾಣ ಹೇಳುವ ಈ ನುಡಿಗಳು ಸದಾ ನೆನಪಿನಲ್ಲಿ ಉಳಿಯತಕ್ಕವು—

ಅತ್ರ ಜನ್ಮ ಸಹಸ್ರಾಣಾಂ ಸಹಸ್ರೈರಪಿ ಸತ್ತಮ ।
ಕದಾಚಿಲ್ಲಭತೇ ಜಂತುಃ ಮಾನುಷ್ಯಂ ಪುಣ್ಯಸಂಚಯಾತ್ ॥
ಗಾಯಂತಿ ದೇವಾಃ ಕಿಲ ಗೀತಕಾನಿ
ಧನ್ಯಾಸ್ತು ಯೇ ಭಾರತ ಭೂಮಿ ಭಾಗೇ ।
ಸ್ವರ್ಗಾಪವರ್ಗಾಸ್ಪದ ಮಾರ್ಗಭೂತೇ
ಭವಂತಿ ಭೂಯಃ ಪುರುಷಾಃ ಸುರತ್ವಾತ್ ॥

— ವಿಷ್ಣು. ೨-೩-೨೩, ೨೪

"ಸಾವಿರಾರು ಜನ್ಮಗಳ ಪುಣ್ಯ ಸಂಚಯದ ಬಲವಾದ ಭಾರತ ದೇಶದಲ್ಲಿ ಮನುಷ್ಯ ಜನ್ಮ ಬರುತ್ತದೆ. ಇಲ್ಲಿ ಹುಟ್ಟಿದವರು ಧನ್ಯರೆಂದು ದೇವತೆಗಳು ಹಾಡಿಕೊಳ್ಳುತ್ತಾರೆ. ಏಕೆಂದರೆ, ಈ ಭರತ ಖಂಡವು ಸ್ವರ್ಗ ಮತ್ತು ಮೋಕ್ಷಗಳಿಗೆ ಮಾರ್ಗವನ್ನು ತೋರಿಸುತ್ತದೆ. ದೇವತಾ ಜನ್ಮ ಕಳೆದ ಮೇಲೆ ಮತ್ತೆ ಅವರು ಇಲ್ಲಿ ಪುರುಷರಾಗಿ ಹುಟ್ಟುತ್ತಾರೆ !"

ಇದಕ್ಕೆ ಕಾರಣ ವೇದವು ಇಲ್ಲಿ ಪ್ರತಿಷ್ಠಿತವಾಗಿರುವುದು. ವೇದವಿಹಿತ ಕರ್ಮಮಾರ್ಗಕ್ಕೆ ಅಧಿಕಾರ ವಿರುವುದು ಇಲ್ಲಿಯೇ. ಸ್ವರ್ಗ–ಅಪವರ್ಗಗಳಿಗೆ ನಿಮಿತ್ತವಾದ ವರ್ಣಾಶ್ರಮ ಧರ್ಮಪಾಲನೆ ಈ ಭರತಖಂಡದಲ್ಲಿ ಮಾತ್ರ ಸಾಧ್ಯವೆಂದು ವಿಷ್ಣುಪುರಾಣದ ಆಶಯ. ಶ್ರೀ ಸೂಕ್ತದಲ್ಲಿ 'ಪ್ರಾದುರ್ಭೂತೋಽಸ್ಮಿ ರಾಷ್ಟ್ರೇಽಸ್ಮಿನ್ ಕೀರ್ತಿಮೃದ್ಧಿಂ ದದಾತು ಮೇ' —'ಈ ರಾಷ್ಟ್ರದಲ್ಲಿ ನಾನು ಜನಿಸಿದ್ದೇನೆ. ನನಗೆ ಕೀರ್ತಿಯನ್ನು ಸಮೃದ್ಧಿಯನ್ನೂ ಶ್ರೀದೇವಿಯು ದಯಪಾಲಿಸಲಿ' — ಎಂಬ ಪ್ರಾರ್ಥನೆಯುಂಟು ಭಾರತ ಭೂಮಿಯಲ್ಲಿ ಜನಿಸಿರುವುದರಿಂದ ಕೀರ್ತಿಸಮೃದ್ಧಿಗಳನ್ನು ಗಳಿಸಲೇಬೇಕು ಎಂಬ ತವಕ ಇಲ್ಲಿ ವ್ಯಕ್ತವಾಗಿದೆ. ಅಥರ್ವವೇದದ ಹನ್ನೆರಡನೇ ಕಾಂಡದಲ್ಲಿ ಪೃಥಿವೀ ಸೂಕ್ತವಿದೆ. ಈ ಸೂಕ್ತವು ದೊಡ್ಡದಿದ್ದು ೬೩ ಮಂತ್ರಗಳು ಜನ್ಮಭೂಮಿಯ ಮಹಿಮೆಯನ್ನು ಹೊಗಳುತ್ತವೆ. ರಾಷ್ಟ್ರ ಭೂಮಿಯನ್ನು ದೇವತೆಯೆಂದೂ, ತಾಯಿಯೆಂದೂ ಇಲ್ಲಿ ಸ್ತುತಿಸಲಾಗಿದೆ. ಈ ಮಂತ್ರಗಳು ಋಷಿಗಳ

ರಾಷ್ಟ್ರಪ್ರೇಮವನ್ನು ಬಹು ಸುಂದರವಾಗಿ ಚಿತ್ರಿಸುತ್ತವೆ. ಈ ರಾಷ್ಟ್ರದಲ್ಲಿ ನಾನಾ ಬಗೆಯ- ಔಷಧಿ ವನಸ್ಪತಿಗಳೂ ಭತ್ತ ಗೋಧಿ ಮುಂತಾದ ಧಾನ್ಯಗಳೂ ಬೆಳೆದು ಮನುಷ್ಯರನ್ನೂ ಪಶುಪಕ್ಷಿಗಳನ್ನೂ ಪೋಷಿಸುತ್ತವೆ ಇವರೆಲ್ಲರಿಗೂ ಆಶ್ರಯವನ್ನಿತ್ತು ನಿವಾಸಸ್ಥಾನವಾಗಿದೆ ಈ ಭೂಮಿ. ಇಲ್ಲಿರುವ ಹೂಗಳ ಸುಗಂಧವನ್ನಾಘ್ರಾಣಿಸಿ ದೇವಗಂಧರ್ವ ಮನುಷ್ಯಾದಿ ಸಮಸ್ತ ಜೀವಿಗಳೂ ಆನಂದಿಸುತ್ತಾರೆ. ಈ ರಾಷ್ಟ್ರವು ತನ್ನ ಗರ್ಭದಲ್ಲಿ ಚಿನ್ನ, ಬೆಳ್ಳಿ, ತಾಮ್ರ, ಕಬ್ಬಿಣ–ಮೊದಲಾದ ಅಮೂಲ್ಯಲೋಹಗಳನ್ನು ಧರಿಸಿದೆ. ಅಲ್ಲದೆ ವಜ್ರ, ಪದ್ಮರಾಗ ಮೊದಲಾದ ರತ್ನಗಳನ್ನು ಜನರಿಗೆ ಕೊಡುತ್ತ ರತ್ನಗರ್ಭೆಯಾಗಿದೆ. ಪ್ರಜೆಗಳು ಹಿಂಸಾದಿ ದುಷ್ಕೃತ್ಯಗಳನ್ನೆಸಗಿದರೂ ಅವನ್ನು ಸಹಿಸಿಕೊಂಡು ಸರ್ವಂಸಹೆಯಾದ ಈ ಭೂಮಿ ಅರಣ್ಯ, ನದೀ, ಕೆರೆ, ಹೊಲ ಗದ್ದೆಗಳ ಮೂಲಕ ಅನ್ನ, ಜಲ, ಫಲ, ತೃಣಾದಿಗಳನ್ನೂ ಕೊಟ್ಟ ತಾಯಿಯಂತೆ ನಮ್ಮನ್ನು ಸಲಹುತ್ತಿದೆ. ಅಯೋಧ್ಯಾ, ಕಾಶೀ ಮುಂತಾದ ಪುಣ್ಯ ಕ್ಷೇತ್ರಗಳಲ್ಲಿಯೂ ಗಂಗಾ, ಯಮುನಾ ನದೀ ತೀರಗಳಲ್ಲಿಯೂ ಋಷಿಗಳು ನೆಲೆಸಿ ಲೋಕ ಕಲ್ಯಾಣಕ್ಕಾಗಿ ಕಠಿಣವಾದ ತಪಸ್ಸನ್ನಾಚರಿಸಿದ್ದರಿಂದ, ಆ ಮಹಾತ್ಮರ ಸಂತಾನದವರೆಂದು ಭಾವಿಸಿ ಈ ದುಷ್ಟರ ಹಾವಳಿಯನ್ನು ನಮ್ಮ ರಾಷ್ಟ್ರಭೂಮಿ ಸಹಿಸಿಕೊಂಡಿದೆ ! ಆದ್ದರಿಂದಲೇ 'ಸರ್ವಂಸಹಾ' ಎನ್ನಿಸಿಕೊಂಡಿದೆ ಈ ಭೂಮಿ- ಇತ್ಯಾದಿ ಸದ್ಭಾವನೆಗಳು ಈ ಸೂಕ್ತದಲ್ಲಿ ಅಭಿವ್ಯಕ್ತವಾಗಿವೆ. ನಿದರ್ಶನಾರ್ಥವಾಗಿ ಪೃಥ್ವೀಸೂಕ್ತದ ಕೆಲವು ಮಂತ್ರಗಳ ಅರ್ಥವನ್ನು ಗಮನಿಸಬಹುದು.

೧. ಸತ್ಯ, ಋತ, ದೀಕ್ಷೆ, ತಪಸ್ಸು, ಪರಮೇಶ್ವರ, ಯಜ್ಞ—ಇವು ನಮ್ಮ ಪೃಥ್ವಿಯನ್ನು ಧರಿಸಿವೆ. ಹಿಂದೆ ಇದ್ದ, ಈಗ ಇರುವ ಮತ್ತು ಮುಂದೆ ಹುಟ್ಟುವ ಸಕಲ ಪ್ರಾಣಿ ವರ್ಗವನ್ನೂ ಈ ಪೃಥ್ವಿಯು ಪಾಲಿಸುತ್ತದೆ. ಇದು ವಿಸ್ತಾರವಾಗಲಿ.

೨. ಯಾವ ಭೂಮಿಯು ಸಮತಟ್ಟಾದ ನೆಲವು ಔಷಧಿಗಳನ್ನೂ ಧಾನ್ಯಗಳನ್ನೂ ಮನುಜರಿಗಾಗಿ ಧರಿಸಿ ನಿಂತಿದೆಯೋ ಅದು ನಮಗೆ ವಿಸ್ತಾರವಾಗಿರಲಿ. ನಮ್ಮ ಉದ್ದೇಶವನ್ನು ಸಾಧಿಸಿ ಕೊಡುತ್ತಿರಲಿ.

೩ ಯಾವ ಭೂಮಿಯಲ್ಲಿ ನಮ್ಮ ಹಿಂದಿನವರು ಸಾಹಸಕೃತ್ಯಗಳನ್ನೆಸಗಿದರೋ ಯಾವುದು ನಮ್ಮ ಗೋವು, ಕುದುರೆ ಮತ್ತು ಹಕ್ಕಿಗಳಿಗೆ ಆಶ್ರಯವನ್ನಿತ್ತಿದೆಯೋ ಅದು ನಮಗೆ ಸದಾ ಷಡ್ವಿಧೈಶ್ವರ್ಯ ಗಳನ್ನೂ ಅನುಗ್ರಹಿಸುತ್ತಿರಲಿ.

೪. ನಮಗೆ ಪ್ರಿಯವಾದ ಯಾವ ರಾಷ್ಟ್ರವು ದೇವತೆಗಳಿಂದ ಪಾಲಿತವಾಗಿದೆಯೋ ಯಾವುದನ್ನು ವಿದ್ವಾಂಸರು ತಮ್ಮ ಪ್ರಭಾವಗಳಿಂದ ಚೆನ್ನಾಗಿ ನಡೆಸಿಕೊಂಡು ಬಂದಿದ್ದಾರೋ ಅಂಥ ಈ ಶ್ರೇಷ್ಠವಾದ ರಾಷ್ಟ್ರದಲ್ಲಿ ಭೂದೇವಿಯು ತೇಜೋಬಲಗಳನ್ನು ಸ್ಥಾಪಿಸಲಿ. (ತ್ವಿಷಿಂ ಬಲಂ ರಾಷ್ಟ್ರೇ ದಧಾತೂತ್ತಮೇ)

೫, ಇಲ್ಲಿರುವ ಹಿಮವಂತ ಮುಂತಾದ ಪರ್ವತಗಳೂ ಅರಣ್ಯಗಳೂ ಅನೇಕ ಬಣ್ಣದ ನೆಲವೂ ನನ್ನನ್ನು ಶತ್ರುವಿಗೆ ಅಜಿತನನ್ನಾಗಿ ಮಾಡಲಿ. ನನ್ನ ಮೈಯಲ್ಲಿ ಗಾಯವಾಗದಂತೆ ಸಂರಕ್ಷಿಸಲಿ.

೬. 'ಮಾತಾ ಭೂಮಿಃ ಪುತ್ರೋಽಹಂ ಪೃಥಿವ್ಯಾಃ' =ನನಗೆ ಈ ಭೂಮಿ ತಾಯಿ. ನಾನು ಇವಳ ಮಗ.

೭. ಈ ರಾಷ್ಟ್ರದಲ್ಲಿ ವಾಸಿಸುವ ಎಲ್ಲ ಜನರೂ, ಹೇ ಭೂಮಿ, ನಿನ್ನ ಮಕ್ಕಳೂ, ಮೃಗಪಕ್ಷಿಗಳೂ ನಿನ್ನ ಮಕ್ಕಳು. ಉದಿಸುವ ಸೂರ್ಯನು ಎಲ್ಲರಿಗೂ ಬೆಳಕನ್ನು ನೀಡುವಂತೆ, ನಮ್ಮೆಲ್ಲರನ್ನೂ ರಕ್ಷಿಸು.

೮. ನಿನ್ನ ಪವಿತ್ರವಾದ ಸುಗಂಧವು ಎಲ್ಲೆಲ್ಲಿಯೂ ಹರಡಲಿ. ಅವರಿಂದ ಶತ್ರುಗಳೂ ಸಂತುಷ್ಟರಾಗಿ ನಮ್ಮನ್ನು ಪೀಡಿಸದಿರಲಿ.

೯. ಶಿಲೆ, ಕಲ್ಲುಹರಳು, ಧೂಳಿಗಳಿಂದ ಆವೃತಳಾದ ಭೂಮಿತಾಯಿ ತನ್ನ ಗರ್ಭದಲ್ಲಿ ಸುವರ್ಣ ರತ್ನಾದಿಗಳನ್ನು ನಮಗಾಗಿ ಧರಿಸಿಕೊಂಡಿದ್ದಾಳೆ ! ಇಂಥ ತಾಯಿಗೆ, ಇದೋ, ನಮಸ್ಕಾರ !

೧೦. ನಾನಾ ಭಾಷೆಯಾಡುವ ಜನರನ್ನೂ ನಾನಾ ಧರ್ಮದವರನ್ನೂ ಬಹು ಪ್ರಕಾರದಲ್ಲಿ ಧರಿಸಿ ಪಾಲಿಸುತ್ತಿರುವ ಈ ಭೂಮಿಯು ಸ್ಥಿರವಾಗಿ ನಮ್ಮವಳಾಗಿಯೇ ಇದ್ದು ನಮ್ಮ ಇಷ್ಟಾರ್ಥಗಳನ್ನು ನೆರವೇರಿಸಲಿ.

೧೧. ಯಾವ ರಾಷ್ಟ್ರದಲ್ಲಿ ಹಗಲು ರಾತ್ರಿಗಳು ಸಮಪ್ರಮಾಣದಲ್ಲಿ ನಡೆಯುತ್ತಿವೆಯೋ, ಮಳೆ ಸಮ ಕಾಲದಲ್ಲಿ ಬೀಳುತ್ತವೆಯೋ ಅಂಥ ಈ ರಾಷ್ಟ್ರ ನಮ್ಮ ಮನೆಗಳಲ್ಲಿ ಸಂತಸವನ್ನು ಬೀರುತ್ತಿರಲಿ.

೧೨. ಸರ್ವದಿಕ್ಕುಗಳಿಂದಲೂ ಬರುವ ವೈರಿಗಳನ್ನು ನಾವು ಹೊಡೆದೋಡಿಸುತ್ತ, ಉತ್ಕೃಷ್ಟ ಜೀವನ ವನ್ನು ಸಾಗಿಸತಕ್ಕವರಾಗಿರೋಣ.

ಋಷಿಗಳ ಹೃದಯಾಂತರಾಳವನ್ನು ಪ್ರತಿಬಿಂಬಿಸುವ ಈ ಭಕ್ತಿಗೀತೆಗಳು ಉತ್ಕೃಷ್ಟ ಭಾವನೆಗಳನ್ನು ಅಭಿವ್ಯಂಜಿಸುತ್ತವೆ.

ಒಂದು ಕಾಲದಲ್ಲಿ ರಾಜನಾಗಲಿ ಸರ್ಕಾರವಾಗಲಿ ಇರಲಿಲ್ಲವೆಂದೂ ಪ್ರಜೆಗಳು ಪರಸ್ಪರ ಸಹಕರಿಸಿ ಧರ್ಮದಿಂದಲೇ ತಮ್ಮನ್ನು ರಕ್ಷಿಸಿಕೊಳ್ಳುತ್ತಿದ್ದರೆಂದೂ ಮಹಾಭಾರತದಲ್ಲಿ ಹೇಳಿದೆ. ಆದರೆ ಮುಂದೆ ಜನಸಂಖ್ಯೆ ಬೆಳೆಯುತ್ತ ಹೋದಾಗ, ನಾನಾ ವಾಣಿಜ್ಯ ವ್ಯಕ್ತಿಗಳೂ ಜೀವನ ಮಾರ್ಗಗಳೂ ವಿಸ್ತರಿಸಿದಾಗ ಪರದೇಶಗಳಿಂದ ದಸ್ಯುಗಳ ಕಾಟವಧಿಕವಾದಾಗ ಜನರಲ್ಲಿ ಸಂಘಟನೆಯೂ ನಿಯಮಪಾಲನೆಯೂ ಅತ್ಯವಶ್ಯಕವಾಗುತ್ತದೆ. ದಸ್ಯುಗಳೊಡನೆ ಹೋರಾಡಲು ವ್ಯವಸ್ಥಿತವಾದ ಸೇನೆ ಬೇಕಾಗುತ್ತದೆ. ಆಂತರಿಕ ಭದ್ರತೆಯು ಕೇಂದ್ರೀಕೃತವಾಗಬೇಕಾಗುತ್ತವೆ. ಪ್ರಜೆಗಳು ಧರ್ಮಮಾರ್ಗದಿಂದ ಎಡವಿದಾಗ ನಿಯಾಮಕನೊಬ್ಬನು ಬೇಕಾಗುತ್ತಾನೆ. ಇವೇ ಮೊದಲಾದ ಕಾರಣಗಳಿಂದ ರಾಷ್ಟ್ರಕ್ಕೆ ಅಧಿನಾಯಕ ನಾದ ರಾಜನನ್ನು ಕಾಲಕ್ರಮದಲ್ಲಿ ಗೊತ್ತುಮಾಡಿಕೊಳ್ಳಲಾಯಿತು. ಇದೆಲ್ಲ ಪ್ರಜೆಗಳ ಅಪೇಕ್ಷೆಗನು-ಗುಣವಾಗಿ ನಡೆದ ಪರಿವರ್ತನೆ. ಸೂಕ್ಷ್ಮದರ್ಶಿಗಳೂ ಕಾರ್ಯದಕ್ಷರೂ ಪ್ರಜಾಹಿತಚಿಂತಕರೂ ಆದ ಋಷಿ ಗಳು ಈ ಪರಿವರ್ತನೆಯ ಅವಶ್ಯಕತೆಯನ್ನು ಮನಗಂಡು ಪ್ರಜೆಗಳ ಸುಖಾಭ್ಯುದಯಗಳಿಗಾಗಿ ಮತ್ತು ಧರ್ಮದ ರಕ್ಷಣೆಗಾಗಿ ರಾಷ್ಟ್ರನಿರ್ಮಾಣದಲ್ಲಿ ಆಸಕ್ತರಾದರು. ರಾಷ್ಟ್ರದ ರಕ್ಷಣೆಗಾಗಿ ವಿವಿಧ ಪ್ರಯೋಗ ಗಳನ್ನೂ ಅವರು ಮಾಡಿದರೆಂದು ಹೇಳಬಹುದಾಗಿದೆ. ರಾಜ್ಯಶಾಸನದಲ್ಲಿ ನಾನಾ ಪ್ರಕಾರಗಳನ್ನು ತೂಗಿ ಅಳವಡಿಸಿ ನೋಡಿದರು. ಐತರೇಯ ಬ್ರಾಹ್ಮಣದಲ್ಲಿ ಇದರ ಸೂಚನೆ ಕಂಡು ಬರುತ್ತದೆ.

"ಸ್ವಸ್ತಿ ಸಾಮ್ರಾಜ್ಯಂ, ಭೌಜ್ಯಂ, ಸ್ವಾರಾಜ್ಯಂ, ವೈರಾಜ್ಯಂ, ಪಾರಮೇಷ್ಠ್ಯಂ ರಾಜ್ಯಂ, ಆಧಿಪತ್ಯ-ಮಯಂ, ಸಮಂತಪರ್ಯಾಯೀ ಸ್ಯಾತ್ ಸಾರ್ವಭೌಮಃ ಸರ್ವಾಯುಷಃ ಆಂತಾದಾಪರಾರ್ಧಾತ್ ಪೃಥಿವ್ಯೈ ಸಮುದ್ರಪರ್ಯಂತಾಯಾ ಏಕರಾಟ್ ॥

—ಐ. ಬ್ರಾ. ೮–೧೫

ಸರ್ವರಿಗೂ ಸುಖವಾಗಲೆಂದು ಹಾರೈಸಿ ಸಾಮ್ರಾಜ್ಯ, ಭೌಜ್ಯ, ಸ್ವರಾಜ್ಯ, ವೈರಾಜ್ಯ, ಮುಂತಾದ ಹಲವು ಬಗೆಯ ಆಡಳಿತ ಪದ್ಧತಿಯನ್ನು ಇಲ್ಲಿ ಹೇಳಲಾಗಿದೆ. ಸಮುದ್ರ ಪರ್ಯಂತವಾದ ಈ ಭಾರತ ಭೂಮಿಗೆ ಸಾರ್ವಭೌಮನಾದ ಒಬ್ಬ ರಾಜನಿರಲೆಂದು ಹಾರೈಸಲಾಗಿದೆ. ಭಾರತ ಭೂಮಿಯಲ್ಲಿ 'ಏಕ-ಸಾಮ್ರಾಟ್' ಇರಬೇಕೆಂಬ ಹಾರೈಕೆಯಿಂದ ಋಷಿಗಳಿಗೆ ಏಕರಾಷ್ಟ್ರತ್ವದ ಕಲ್ಪನೆ ನಿಚ್ಚಳವಾಗಿದ್ದಿತೆಂದು

ಗೊತ್ತಾಗುತ್ತದೆ. ದುರ್ಬಲಜನಾಂಗದಿಂದ ಇಂತಹ ಹಾರೈಕೆ ಶಕ್ಯವಲ್ಲವೆಂಬುದನ್ನೂ ನೆನಪಿನಲ್ಲಿಡಬೇಕು. ರಾಜನ ಅವಶ್ಯಕತೆಯನ್ನು ಕಂಡು ಅವನನ್ನು ನೇಮಿಸಿಕೊಂಡವರು ಪ್ರಜೆಗಳು. ಆದ್ದರಿಂದ ರಾಜನಿರುವುದು ಪ್ರಜೆಗಳ ಸುಖಗಳಿಗಾಗಿಯೇ ಹೊರತು, ಪ್ರಜೆಗಳಿರುವುದು ರಾಜನಿಗಾಗಿ ಅಲ್ಲ. ರಾಜನಿಗೆ ಪ್ರಜೆಗಳು ಆಧಾರ ಎನ್ನುತ್ತದೆ ವಾಜಸನೇಯ ಸಂಹಿತೆ—'ವಿಶಿರಾಜಾ ಪ್ರತಿಷ್ಠಿತ'ಃ–ರಾಜನು ಪ್ರಜೆಗಳನ್ನು ಆಧರಿಸಿ ನಿಂತಿದ್ದಾನೆ. ಇದೇ ಸಂಹಿತೆಯಲ್ಲಿ ರಾಜನು ಹೇಳುತ್ತಾನೆ. "ನನ್ನ ಪೀಠವು ರಾಷ್ಟ್ರ, ನನ್ನ ಹೊಟ್ಟೆ, ಭುಜ, ಕತ್ತು, ಪೃಷ್ಠಭಾಗ, ತೊಡೆ, ಮೊಳಕೈ, ಮೊಳಕಾಲು—ಇವೆಲ್ಲ ನನ್ನ ಪ್ರಜೆಗಳೇ. ನಾನು ಪಾಪಗಳಿಂದ ಸಂಚರಿಸುವ ಧರ್ಮಪುರುಷನಾಗಿದ್ದೇನೆ."

ರಾಜನ ಶರೀರವೇ ಪ್ರಜೆ. ಪ್ರಜೆಗಳಿಗಿಂತ ಭಿನ್ನನಾಗಿ ಸಿಡಿದು ನಿಂತ ರಾಜನೆಂಬ ಅತಿರಿಕ್ತವ್ಯಕ್ತಿ ಇಲ್ಲ ಎಂಬುದು ಋಷಿಗಳ ಅಭಿಮತ. ರಾಷ್ಟ್ರವನ್ನು ಕಟ್ಟುವುದಕ್ಕಾಗಿ ಋಷಿಗಳು ಶ್ರಮಿಸಿದರೆಂದು ಈ ಮಂತ್ರವು ಹೇಳುತ್ತದೆ—

ಭದ್ರಮಿಚ್ಛಂತ ಋಷಯಃ ಸ್ವರ್ವಿದ ಸ್ತಪೋ ದೀಕ್ಷಾಮುಪನಿಷೇದುರಗ್ರೇ ।
ತತೋ ರಾಷ್ಟ್ರಂ ಬಲಮೋಜಶ್ಚ ಜಾತಂ ತದಸ್ಮೈ ದೇವಾ ಉಪಸಂನಮಂತು ॥

"ಆತ್ಮಜ್ಞಾನಿಗಳಾದ ಋಷಿಗಳು ಸಕಲರ ಕಲ್ಯಾಣವನ್ನು ಬಯಸತಕ್ಕವರಾಗಿ ಪೂರ್ವದಲ್ಲಿ ತಪೋದೀಕ್ಷೆಯನ್ನು ಕೊಟ್ಟರು. ಅದರಿಂದ ರಾಷ್ಟ್ರದ ನಿರ್ಮಾಣವಾಯಿತು. ರಾಷ್ಟ್ರದಲ್ಲಿ ಬಲ, ಪರಾಕ್ರಮಗಳು ಹೆಚ್ಚಿದವು. ಆದ್ದರಿಂದ ಈ ರಾಷ್ಟ್ರಕ್ಕಾಗಿ ದೇವತೆಗಳು (ವಿದ್ವಾಂಸರು) ನಮ್ರತೆಯಿಂದ ನಡೆದುಕೊಳ್ಳಬೇಕು.

ಮೇಲ್ಕಂಡ ಮಂತ್ರದಲ್ಲಿ 'ತಪೋದೀಕ್ಷೆ' ಎಂಬ ಶಬ್ದವನ್ನು ಗಮನಿಸಬೇಕು. ಇಲ್ಲಿ ತಪೋದೀಕ್ಷೆ ಎಂದರೆ, ಸರ್ವಸುಖಗಳನ್ನೂ ತ್ಯಾಗಮಾಡಿ ಏಕನಿಷ್ಠೆಯಿಂದ ಸತತವಾಗಿ ದುಡಿಯಬೇಕಾದ ಕರ್ಮಯೋಗ. ಅದು ಜ್ಞಾನಪೂರ್ವಕವಾದದ್ದು. ತಪಃಶಬ್ದಕ್ಕೆ ಜ್ಞಾನವೆಂದೂ ಅರ್ಥವಿದೆ. ಇಂತಹ ಜ್ಞಾನಪೂರ್ವಕವಾದ ನಿಷ್ಕಾಮ ಕರ್ಮಯೋಗದಿಂದಲೇ ರಾಷ್ಟ್ರನಿರ್ಮಾಣ ಸಾಧ್ಯ. ಪುರಾತನ ಋಷಿಗಳ ತಪಸ್ಸಿನಿಂದ ರೂಪಗೊಂಡ ರಾಷ್ಟ್ರ ಭಾರತ. ಅವರು ಹಾಕಿಕೊಟ್ಟ ಕಟ್ಟುಪಾಡುಗಳಿಗೆ ಒಳಪಟ್ಟು ಧರ್ಮದಿಂದ ಪ್ರಜಾಪಾಲನೆ ಮಾಡಬೇಕೆಂದು ಎಚ್ಚರಿಕೆಯನ್ನಿಲ್ಲಿ ಕೊಡಲಾಗಿದೆ. 'ತದಸ್ಮೈ ದೇವಾ ಉಪಸಂನಮಂತು' ಎಂದು.

ರಾಷ್ಟ್ರದ ರಕ್ಷಣೆಯ ಭಾರವನ್ನು ಹೊತ್ತವರಿಗೆ ರಾಷ್ಟ್ರವು ಬೇಕಾದಷ್ಟು ಸೌಕರ್ಯಗಳನ್ನೊದಗಿಸುತ್ತದೆ. ಅಂತೆಯೇ ಅವರಿಗೆ ವಿಶಿಷ್ಟ ಅಧಿಕಾರಗಳನ್ನೂ ಕೊಟ್ಟಿರುತ್ತದೆ. ಅಧಿಕಾರ ಮದವು ತಲೆಗೇರಿ ಆತನು ಧರ್ಮಭ್ರಷ್ಟನಾಗಿ ಪ್ರಜಾಪೀಡಕನಾದರೆ, ಆತನನ್ನು ಋಷಿಗಳೇ ದಂಡಿಸಿದ್ದುಂಟು. ವೇನ ರಾಜನ ಕಥೆ ಇದಕ್ಕೆ ಸಾಕ್ಷಿ. ರೋಚಕವಾದ ಇನ್ನೊಂದು ಪೂರ್ವಕಥೆಯುಂಟು. ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿ 'ನೀವು ಏನು ಮಾಡುತ್ತೀರಿ ?' ಎಂದು ಕೇಳಿದನಂತೆ. ಅವರಲ್ಲಿ ಕೆಲವರು 'ರಕ್ಷಾಮಃ' ಎಂದು ಹೇಳಿದರು. ಪ್ರಜಾಪತಿಯು ಅವರನ್ನು ಪ್ರಜಾರಕ್ಷಣ ಕಾರ್ಯಕ್ಕೆ ನಿಯೋಜಿಸಿದನು. ಅವರು ರಕ್ಷಣೆ ಮಾಡುತ್ತ ಮಾಡುತ್ತ 'ರಾಕ್ಷಸ'ರಾಗಿ ಬಿಟ್ಟರಂತೆ ! ಆದ್ದರಿಂದ ರಾಕ್ಷಸರಿಗೆ 'ಪೂರ್ವದೇವ' ಎಂಬ ಹೆಸರುಂಟು. (ಪೂರ್ವದೇವಾಃ ಸುರದ್ವಿಷಃ– ಅಮರಕೋಶ). ಎಲ್ಲಿಯವರೆಗೆ ತಮ್ಮ ಕರ್ತವ್ಯವನ್ನು ಪಾಲಿಸುತ್ತ ಧರ್ಮನಿಷ್ಠರಾಗಿದ್ದರೋ ಅಲ್ಲಿಯವರೆಗೆ ದೇವತೆಗಳಾಗಿದ್ದರು. ಅನಂತರ ತಮ್ಮ ದುಃಶೀಲದಿಂದ ರಾಕ್ಷಸರಾಗಿ ಪೂರ್ವದೇವರಾದರು ! ಮಾಜಿ ದೇವತೆಗಳು ಎಂದು ಅದರ ಅರ್ಥ ! ಮಾಜಿ ಗಾಂಧಿ ಭಕ್ತರಿದ್ದಂತೆ !

ರಾಜನಿಗೆ ಪಟ್ಟಾಭಿಷೇಕ ಮಾಡುವ ಕಾಲದಲ್ಲಿ ಅವನಿಗೆ ಋಷಿಗಳು ನೀಡುತ್ತಿದ್ದ ಉಪದೇಶ ಋಗ್ವೇದದಲ್ಲಿದೆ. "ಎಲೈ ರಾಜನೆ, ನಾವು ನಿನ್ನನ್ನು ರಾಜ್ಯಪೀಠದಲ್ಲಿ ಸ್ಥಾಪಿಸಿದ್ದೇವೆ. ನೀನು ಇಲ್ಲಿ ಸ್ಥಿರನಾಗಿರು. ಸಕಲ ಪ್ರಜೆಗಳೂ ನಿನ್ನನ್ನು ಬಯಸಿ ಪ್ರೀತಿಸುವಂತಾಗಲಿ. ಚಂಚಲನಾಗಬೇಡ. ನಿನ್ನಿಂದ ರಾಷ್ಟ್ರವು ಭ್ರಷ್ಟವಾಗಬಾರದು. ರಾಷ್ಟ್ರವು ನಿನ್ನಿಂದ ದೂರವಾಗದಿರಲಿ. ನೀನು ಇಲ್ಲಿಯೇ ಸ್ಥಿರನಾಗಿರು. ಪರ್ವತದಂತೆ ಅಚಲನಾಗಿರು. ಇಂದ್ರನಂತೆ ಪ್ರತಾಪಿಯಾಗಿ ರಾಷ್ಟ್ರವನ್ನು ರಕ್ಷಿಸು. ಆಕಾಶ, ಪೃಥ್ವಿ, ಪರ್ವತಗಳು ಹೇಗೆ ಸ್ಥಿರವಾಗಿವೆಯೋ ಹಾಗೆ ನೀನು ಕರ್ತವ್ಯದಲ್ಲಿ ಸ್ಥಿರನಾಗು" ॥

—ಋಗ್ವೇದ. ೧೦-೧೭-೩

ರಾಷ್ಟ್ರದಲ್ಲಿ ಪರಮೋದ್ದೇಶ ಯಾವುದು? ಪ್ರತಿಯೊಬ್ಬ ಪ್ರಜೆಯೂ ರಾಷ್ಟ್ರದ ಹಿತಚಿಂತನೆಗಾಗಿ ಯಾವುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು? ಅದನ ಧ್ಯೇಯ ಮಂತ್ರ ಅಥವಾ ರಾಷ್ಟ್ರಗೀತೆ ಯಾವುದು? ರಾಷ್ಟ್ರಗೀತೆ ಎಂಬ ಶಬ್ದ ಆ ಕಾಲದಲ್ಲಿ ವ್ಯವಹಾರದಲ್ಲಿರಲಿಲ್ಲವಾದರೂ ರಾಷ್ಟ್ರದ ಉತ್ಕರ್ಷವನ್ನು ಅವರ ಯಾವ ತತ್ವದ ಹಿನ್ನಲೆಯಲ್ಲಿ ಕಂಡಿದ್ದರೆನ್ನುವುದನ್ನು ಗುರುತಿಸುವುದು ಅಶಕ್ಯವಲ್ಲ. ರಾಷ್ಟ್ರಭೂಮಿಯನ್ನು ತಾಯಿಯೆಂದು ತಿಳಿದು ಮೊದಲು ಗೌರವವನ್ನರ್ಪಿಸಿದವರು ನಮ್ಮ ಋಷಿಗಳು. ಜಗತ್ತಿನಲ್ಲಿ ಮಾತೃಭೂಮಿ, ತಾಯಿನಾಡು-ಎಂಬೀ ಶಬ್ದಗಳ ಹುಟ್ಟಿಗೆ ಸ್ಫೂರ್ತಿಯನ್ನಿತ್ತವರು ಈ ಋಷಿಗಳೇ.

೧. ಮಾತಾ ಭೂಮಿಃ ಪುತ್ರೋಽಹಂ ಪೃಥಿವ್ಯಾಃ ।
೨. ಸಾ ನೋ ಭೂಮಿರ್ವಿಸೃಜತಾಂ ಮಾತಾ ಪುತ್ರಾಯ ಮೇ ಪಯಃ ।
೩. ಭೂಮೇ ಮಾತರ್ನಿಧೇಹಿ ಮಾ ಭದ್ರಯಾ ಸುಪ್ರತಿಷ್ಠಿತಂ ।

ಇತ್ಯಾದಿ ವೇದ ವಚನಗಳೇ ಇದಕ್ಕೆ ಪ್ರಮಾಣ. 'ಶಿವಾಂ ಸ್ಯೋನಾಮನುಚರೇಮ ವಿಶ್ವಹಾ' ಇತ್ಯಾದಿ ಮಂತ್ರಗಳಲ್ಲಿ ಮಾತೃಭೂಮಿಯ ಸೇವೆ ಎಲ್ಲ ಪ್ರಜೆಗಳ ಕರ್ತವ್ಯವೆಂದು ವೇದವು ಬೋಧಿಸಿದೆ. 'ವಯಂ ತುಭ್ಯಂ ಬಲಿಹೃತಃ ಸ್ಯಾಮ—ಹೇ ಭೂಮಾತೆ, ನಾವು ನಿನಗೆ ಬಲಿಯನ್ನರ್ಪಿಸುತ್ತೇವೆ' ಎಂಬ ಮಾತೃಭೂಮಿಗಾಗಿ ಆತ್ಮಾರ್ಪಣವನ್ನು ಹೇಳಿದೆ. ಇದನ್ನೆಲ್ಲ ಪರ್ಯಾಲೋಚಿಸಿದಾಗ ಋಷಿಗಳ ಕಲ್ಪನೆಯಲ್ಲಿದ್ದ ರಾಷ್ಟ್ರಗೀತೆಯೆಂದರೆ, ಹಿಂದೆ ಪ್ರಸ್ತಾಪಿಸಿದ ಅಥರ್ವವೇದದ ಪೃಥ್ವೀಸೂಕ್ತ ಮೊದಲನೆಯದು. ಎರಡನೆಯದಾಗಿ ಯಜುರ್ವೇದದ ಈ ಮಂತ್ರ—

"ಆ ಬ್ರಹ್ಮನ್ ಬ್ರಾಹ್ಮಣೋ ಬ್ರಹ್ಮವರ್ಚಸೀ ಜಾಯತಾಂ, ಆಸ್ಮಿನ್ ರಾಷ್ಟ್ರೇ ಶೂರ ಇಷವ್ಯೋಽತಿವ್ಯಾಧೀ ಮಹಾರಥೋ ಜಾಯತಾಂ, ದೋಗ್ಧ್ರೀ ಧೇನುಃ, ವೋಢಾ ಅನಡ್ವಾನ್, ಆಶುಃ ಸಪ್ತಿಃ, ಪುರಂಧಿರ್ಯೋಷಾ............ಯೋಗಕ್ಷೇಮೋ ನಃ ಕಲ್ಪತಾಮ್"

"ಹೇ ಈಶ್ವರ, ನಮ್ಮ ರಾಷ್ಟ್ರದಲ್ಲಿ ಬ್ರಾಹ್ಮಣನು ಬ್ರಹ್ಮವರ್ಚಸ್ಸಿನಿಂದ ತೇಜಸ್ವಿಯಾಗಿರಲಿ; ಶೂರನೂ ಶತ್ರುಗಳನ್ನು ಬಾಣಗಳಿಂದ ಹೊಡೆದು ಉರುಳಿಸಬಲ್ಲ ಮಹಾರಥನೂ ಆಗಿರಲಿ; ಹಸು ಹಾಲು ಕೊಡತಕ್ಕದ್ದೂ ಎತ್ತು ಭಾರವನ್ನೆಳೆಯತಕ್ಕದ್ದೂ ಕುದುರೆ ವೇಗವಾಗಿ ಓಡಬಲ್ಲದ್ದೂ ಆಗಲಿ; ಸ್ತ್ರೀಯು ಬುದ್ಧಿವಂತಳೂ ಸುಶೀಲಳೂ ಆಗಿರಲಿ. ಯಜಮಾನನಾದ ಪುರುಷನಿಗೆ ರಥದಲ್ಲಿ ಕುಳಿತು ಜಯವನ್ನು ಗಳಿಸತಕ್ಕವನೂ ಸಭೆಯಲ್ಲಿ ಸಂಮಾನ್ಯನಾಗಿ ಯುವಕನಾದ ವೀರಪುತ್ರನಿರಲಿ; ನಮ್ಮ ರಾಷ್ಟ್ರದಲ್ಲಿ ಮೋಡವು ಕಾಲ ಕಾಲಕ್ಕೆ ಮಳೆಯನ್ನು ಸುರಿಸಲಿ; ಔಷಧಿಗಳು ಫಲಪುಷ್ಪಗಳಿಂದ ತುಂಬಿರಲಿ; ನಮ್ಮೆಲ್ಲರ ಯೋಗಕ್ಷೇಮಗಳು ಸರಿಯಾಗಿ ನಡೆಯಲಿ"

ಕೆಳಗಿನ ಮಂತ್ರವಾಕ್ಯಗಳನ್ನು ಪರಿಶೀಲಿಸಿದರೆ ನಮ್ಮ ಋಷಿಗಳ ಉನ್ನತಧ್ಯೇಯದ ಪರಿಚಯ ಸ್ವಲ್ಪಮಟ್ಟಿಗೆ ಆಗುತ್ತದೆ.

೧. ದಾತಾರೋ ನೋऽಭಿವರ್ಧಂತಾಂ ವೇದಾಃ ಸಂತತಿರೇವ ನಃ ।
(ನಮಗೆ ಸಂಪತ್ತನ್ನು ಗಳಿಸಿಕೊಡತಕ್ಕವರು ವೃದ್ಧಿ ಹೊಂದಲಿ. ನಮ್ಮ ಜ್ಞಾನಶಕ್ತಿಗಳೂ ಸಂತತಿಯೂ ಬೆಳೆಯಲಿ)

೨. ಶ್ರದ್ಧಾ ಚ ನೋ ಮಾ ವ್ಯಗಮತ್ । (ಶ್ರದ್ಧೆಯು ನಮ್ಮಿಂದ ದೂರವಾಗದಿರಲಿ).

೩. ಬಹುದೇಯಂ ಚ ನೋऽಸ್ತು । (ನಾವು ಕೊಡತಕ್ಕ ವಸ್ತು ಹೆಚ್ಚಾಗಲಿ)

೪. ಅನ್ನಂ ಚ ನೋ ಬಹು ಭವೇತ್ । (ತಿನ್ನುವ ಆಹಾರವಸ್ತು ನಮಗೆ ಅಧಿಕವಾಗಿ ದೊರೆಯಲಿ)

೫. ಅತಿಥೀಂಶ್ಚ ಲಭೇಮಹಿ । (ನಮ್ಮ ಮನೆಗೆ ಅತಿಥಿಗಳು ಬರುವಂತಾಗಲಿ)

೬. ಯಾಚಿತಾರಶ್ಚ ನಃ ಸಂತು, ಮಾ ಚ ಯಾಚಿಷ್ಮ ಕಂಚನ (ನಮ್ಮ ಬಳಿಗೆ ಬಂದು ಯಾಚಿಸತಕ್ಕವರು ಇರಲಿ, ಆದರೆ ನಾವು ಮಾತ್ರ ಯಾರನ್ನೂ ಯಾಚಿಸದೆ ಇರೋಣ.)

'ಮಾ ಚ ಯಾಚಿಷ್ಮ ಕಂಚನ' ! ಇದನ್ನು ನಮ್ಮ ರಾಜಕೀಯಸ್ಥರು ಮತ್ತೆ ಮತ್ತೆ ಚಿಂತಿಸುತ್ತಿರಬೇಕು. 'ಓಂ ಶಾಂತಿಃ ಶಾಂತಿಃ ಶಾಂತಿಃ' ಎಂದು ವಿಶ್ವಕಲ್ಯಾಣವನ್ನು ಬಯಸುವುದೇ ವೈದಿಕ ಋಷಿಗಳ 'ರಾಜಕೀಯ'ದ ಮೂಲಮಂತ್ರ.

ಯದ್ ವದಾಮಿ ಮಧುಮತ್ತದ್ ವದಾಮಿ = ಯಾವುದನ್ನು ಹೇಳುತ್ತೇನೋ ಅದನ್ನು ಮಧುರವಾಗಿ ಜೇನಿನಿಂದ ತುಂಬಿರುವಂತೆ ಹೇಳುತ್ತೇನೆ. !

(ಆಧಾರ : ಪಂ. ಶ್ರೀ ಸಾತವಳೇಕರ್ ಅವರ ವೈದಿಕ ವ್ಯಾಖ್ಯಾನ ಮಾಲಾ)

**ವಿದ್ವಾನ್ ಎನ್. ರಂಗನಾಥಶರ್ಮಾ**
ನಿವೃತ್ತ ವ್ಯಾಕರಣಶಾಸ್ತ್ರ ಪ್ರಾಧ್ಯಾಪಕರು,
ಚಾಮರಾಜೇಂದ್ರ ಸಂಸ್ಕೃತ ಕಾಲೇಜು,
(ಬೆಂಗಳೂರು)



ಶ್ರೀಮತೇ ಹಯಗ್ರೀವಾಯನಮಃ— ಶ್ರೀ ರಂಗಸದ್ಗುರವೇ ನಮಃ

# ವೇದದಲ್ಲಿ ಯೋಗವುಂಟೇ ?

ಸನಾತನ ಆರ್ಯ ಭಾರತೀಯ ಮಹರ್ಷಿಗಳ ಧರ್ಮ ಮತ್ತು ಸಂಸ್ಕೃತಿಗಳಿಗೆ ಆಧಾರ ಸ್ತಂಭವಾಗಿ ಪರಮ ಪ್ರಮಾಣ ಭೂತವಾಗಿರುವ ದಿವ್ಯ ಸಾಹಿತ್ಯವಾಗಿದೆ ವೇದ.* ಇದು ತತ್ತ್ವಹಿತ ಪುರುಷಾರ್ಥಗಳ ಶ್ರೀಕೋಶ. ಎಲ್ಲ ಪುರುಷಾರ್ಥಗಳಿಗೂ ಮತ್ತು ಅವುಗಳಲ್ಲಿಯೂ ವಿಶೇಷವಾಗಿ ಮೋಕ್ಷಕ್ಕೂ ಪರಮೋಪಾಯವಾಗಿರುವ 'ಯೋಗ'ದ ಪ್ರತಿಪಾದನೆಯನ್ನು ಅದರಲ್ಲಿ ನಾವು ನಿರೀಕ್ಷಿಸುವುದು ಅತ್ಯಂತ ಸಹಜವಾಗಿದೆ. "ಅಧ್ಯಯನ ಮಾಡಿದ್ದನ್ನು ಯೋಗದಲ್ಲಿ ಕಾಣಬೇಕು. ಯೋಗದಲ್ಲಿ ಕಂಡಿದ್ದನ್ನು ಕುರಿತು ಅಧ್ಯಯನ ಮಾಡಬೇಕು." ("ಸ್ವಾಧ್ಯಾಯಾದ್ಯೋಗಮಾಸೀತ, ಯೋಗತ್ಸ್ವಾಧ್ಯಾಯಂ ಮಾ–ಚರೇತ್ । ಸ್ವಾಧ್ಯಾಯ ಯೋಗಯುಕ್ತ್ಯೋಹಿ ಪರಮಾತ್ಮಾ ಪ್ರಕಾಶತೇ" । ಎಂಬುದು ಬ್ರಹ್ಮಾನು–ಭವಿಗಳಾದ ವೈದಿಕ ಮಹರ್ಷಿಗಳ ಉಪದೇಶ.

ಆದರೆ ಬಣ್ಣದ ಕನ್ನಡಕದಿಂದ ವೈದಿಕ ಸಾಹಿತ್ಯವನ್ನು ನೋಡುವ ಕೆಲವು ಇತ್ತೀಚಿನ ವಿಮರ್ಶಕರು (ಇದರಲ್ಲಿ ಬಹುಮಂದಿ ಪಾಶ್ಚಾತ್ಯರ ಮಾನಸ ಪುತ್ರರು) "ಪುರಾತನವಾದ ವೇದ ಸಾಹಿತ್ಯದಲ್ಲಿ ಯೋಗವು ಇರಲು ಸಾಧ್ಯವಿಲ್ಲ. ಯೋಗವು ಕ್ರಿ. ಪೂ. ೭ ನೇ ಶತಮಾನದಿಂದ ಇತ್ತೀಚೆಗೆ ನಮ್ಮ ದೇಶದಲ್ಲಿ ಪ್ರಚಾರಕ್ಕೆ ಬಂದಿತು" ಎಂದು ಅಭಿಪ್ರಾಯ ಪಡುತ್ತಾರೆ. ಇದು ಸರಿಯಲ್ಲ. ಪ್ರಾಚೀನ ವೇದಗಳಿಗೂ ಯೋಗಕ್ಕೂ ಗಂಟು ನಂಟು ಉಂಟು ಎಂಬುದನ್ನು ಇಲ್ಲಿ ಸಂಕ್ಷೇಪವಾಗಿ ಪ್ರತಿಪಾದಿಸುತ್ತೇವೆ.

ಯೋಗಶಬ್ದಕ್ಕೆ ಉಪಾಯ, ಬಂಧನ, ಹೂಡುವಿಕೆ, ಜೀವಾತ್ಮ ಪರಮಾತ್ಮರ ಸೇರುವೆ, ಸಿದ್ಧಿ ಅಸಿದ್ಧಿಗಳಲ್ಲಿ ಸಮರೂಪವಾದ ಚಿತ್ತ ಸಮಾಧಾನ, ಕರ್ಮಬಂಧನವನ್ನು ತೊಲಗಿಸುವ ಕೌಶಲ, ದುಃಖ ಸಂಯೋಗ ವಿಯೋಗ, ಚಿತ್ತ ನಿರೋಧ. ಸಮಾಧಿ, ಆತ್ಮ ಚಿಂತನೆ, ಧ್ಯಾನ ಮುಂತಾದ ನಾನಾ ಅರ್ಥಗಳಿದ್ದರೂ ಅವೆಲ್ಲವೂ ವಿಧಿ, ನಿಷೇಧ, ಉಪಾಯ, ಉಪೇಯ ಸ್ವರೂಪಗಳಾಗಿ ಒಂದೇ ವಿಷಯವನ್ನೇ ಹೇಳುತ್ತವೆ. ಅದು ಜೀವ ದೇವರ ಸೇರುವೆ, ಈ ಅರ್ಥಪುಷ್ಟಿ ಮೂಲಗಳ ಯೋಗವನ್ನು ವೈದಿಕ ಸಾಹಿತ್ಯವಲ್ಲಿ ನಾವು ಪುಷ್ಕಲವಾಗಿ ನೋಡುತ್ತೇವೆ.

ವೇದ ಪುರುಷನ ಶಿರಸ್ಸಿನ ಸ್ಥಾನದಲ್ಲಿರುವ ಉಪನಿಷತ್ತು ಯೋಗಶಾಸ್ತ್ರವೂ ಆಗಿದೆ. ಸೂಚನಾ ಮಾತ್ರ ಸಾರವಾಗಿ ಇದಕ್ಕೆ ಕೆಲವು ನಾವು ಪುಷ್ಕಲವಾಗಿ ನೋಡುತ್ತೇವೆ. ಉದಾಹರಣೆಗಳನ್ನು ಕೊಡಬಹುದು.

೧. "ಓಂ" ಎಂದು ಆತ್ಮವನ್ನು ಪರಮಾತ್ಮನೊಡನೆ ಯೋಜನೆ ಮಾಡಿರಿ" ("ಓಮಿತ್ಯಾತ್ಮನಂ ಯುಂಜೀತ") ಎನ್ನುತ್ತದೆ ಯಾಜ್ಞಿಕೀ ಉಪನಿಷತ್ತು.

೨. "ಆ ಸ್ಥಿರವಾದ ಇಂದ್ರಿಯ ಧಾರಣೆಯೇ ಯೋಗವೆಂದು ತಿಳಿಯಲ್ಪಡುತ್ತದೆ. ಆಗ ಅಸಮಾಧಾನತೆ

---

* "ವೇದೋಖಿಲೋ ಧರ್ಮಮೂಲಂ" (ಮನು) " ವಿರೋಧೇತ್ವನ್ಯಪೇಕ್ಷ್ಯಂ ಸ್ಯಾತ್" (ಮೀಮಾಂಸಸೂತ್ರ)

ಇರುವುದಿಲ್ಲ. ಯೋಗವೇ ಸೃಷ್ಟಿಲಯಗಳು. "ತಾಂ ಯೋಗಮಿತಿಮನ್ಯನ್ತೇ ಸ್ಥಿರಾಮಿಂದ್ರಿಯ ಧಾರಣಾಂ । ಅಪ್ರಮತ್ತಸ್ತದಾಭವತಿ ಯೋಗೋ ಹಿ ಪ್ರಭವಾಪ್ಯಯಂ" ಎಂದು ಯೋಗವನ್ನು ಲಕ್ಷಿಸಿ, ಯೋಗಪ್ರೋಕ್ತವಾದ ನಾಡಿಗಳ ಸ್ವರೂಪವನ್ನು ಕಠೋಪನಿಷತ್ತು ರಚಿಸಿ ಸಾರುತ್ತದೆ.

೩. "ಶತಂಚೈಕಾ ಚ ಹೃದಯಸ್ಯ ನಾಡ್ಯಃ । ತಾಸಾಂ ಮೂರ್ಧಾನ ಮಭಿನಿಃಸೃತೈಕಾ । ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೇ ಭವನ್ತಿ"

೪. "ಪಂಚರೂಪವಾದ ಯೋಗಾನುಗುಣಗಳು ಯೋಗಿಗೆ ಉಂಟಾದಾಗ ಅವನು ಯೋಗಾಗ್ನಿಮಯ ವಾದ ದೇಹವನ್ನು ಪಡೆದು ರೋಗ ಮುಪ್ಪು ಸಾವುಗಳನ್ನು ದಾಟುತ್ತಾನೆ."

'ಪಂಚಾತ್ಮಕೇ ಯೋಗಗುಣೇ ಪ್ರವೃತ್ತೇ । ನ ತಸ್ಯ ರೋಗೋ ನ ಜರಾ ನ ಮೃತ್ಯುಃ ಪ್ರಾಪ್ತಸ್ಯ ಯೋಗಾಗ್ನಿಮಯಂ ಶರೀರಂ" ಎಂಬುದು ಶ್ವೇತಾಶ್ವತರದ ಸ್ಪಷ್ಟವಾದ ಘೋಷಣೆ

೫. ಔಪನಿಷದ ಯೋಗದ ಅನುಷ್ಠಾನವನ್ನು ಮುಂಡಕಶ್ರುತಿ ಸುಂದರ ರೂಪಕದಿಂದ ವರ್ಣಿಸುತ್ತದೆ.

"ಉಪನಿಷತ್ತುಗಳು ಹೇಳುವ ಮಹಾಸ್ತ್ರ ಧನುಸ್ಸನ್ನು ತೆಗೆದುಕೊಂಡು ನಿರಂತರ ಧ್ಯಾನದಿಂದ ತೀಕ್ಷ್ಣವಾದ ಬಾಣವನ್ನು ಜೋಡಿಸಿರಿ. ಸಂಯಮದಿಂದ, ಅದರ ಭಾವನೆಯಲ್ಲಿ ಲೀನವಾದ ಚಿತ್ತದಿಂದ ಲಕ್ಷ್ಯವಾಗಿರುವ ಆ ಅಕ್ಷರ ಪರಬ್ರಹ್ಮವನ್ನೇ ಮುಟ್ಟುವವನಾಗು."

೬. ಇನ್ನೂ ಸ್ಪಷ್ಟವಾಗಿರುವ ಕೆಳಗಿನ ರೂಪಕವನ್ನು ನೋಡಿರಿ । "ಪ್ರಣವವೇ ಧನುಸ್ಸು, ಆತ್ಮವೇ ಬಾಣ. ಬ್ರಹ್ಮವು ಅದರ ಗುರಿಯೆಂದು ತಿಳಿಯಬೇಕು. ಪ್ರಮಾದವಿಲ್ಲದೆ ಆ ಗುರಿಯನ್ನು ಸಾಧಿಸ ಬೇಕು. ಬಾಣದಂತೆ ತನ್ಮಯನಾಗಬೇಕು.

೭. ಕಠ ಮತ್ತು ಮೈತ್ರಾಯಣೀ ಉಪನಿಷತ್ತುಗಳು ಯೋಗವನ್ನು ಪಾರಿಭಾಷಿಕ ಶಬ್ದವನ್ನಾಗಿಯೇ ಬಳಸುತ್ತವೆ. ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ ತರ್ಕ ಸಮಾಧಿಗಳೆಂದು ಆರು ಅಂಗಗಳುಳ್ಳದ್ದು ಯೋಗ ಎಂದು ಮೈತ್ರೀ ಉಪನಿಷತ್ತಿನ ಪ್ರತಿಪಾದನೆ.

೮. "ಆ ಆತ್ಮ ಪದವನ್ನು ಜ್ಞಾನಯೋಗದಿಂದ ತಿಳಿದರೆ ಪಾಪಕರ್ಮ ಅಂಟುವುದಿಲ್ಲ" ಎಂಬುದು ಬ್ರಾಹ್ಮಣ ಗ್ರಂಥದ ಉಪದೇಶ. "ತಸ್ಯೈವಾತ್ಮಾ ಪದವಿತ್ತಂ ವಿದಿತ್ವಾ ನ ಕರ್ಮಣಾ ಲಿಪ್ಯತೇ ಪಾಪಕೇನ । ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ" "ಈ ಮಹಾಪುರುಷನನ್ನು, ಆದಿತ್ಯವರ್ಣನನ್ನು ತಮಸ್ಸಿನ ಪಾರದಲ್ಲಿ ನಾನು ಕಂಡುಕೊಂಡೆನು" (ವೇದಾಹಮೇತಂ ಪುರುಷಂ ಮಹಾನ್ತಂ ಆದಿತ್ಯ ವರ್ಣಂ ತಮಸಸ್ತು ಪಾರೇ) !

೯. ಕುರುಡನು ಮಣಿಯನ್ನು ನೋಡಿದ ; ಬೆರಳಿಲ್ಲದವನು ಮತ್ತು ಕಂಠವಿಲ್ಲದವನು ಅದನ್ನು ಧರಿಸಿದ ! ನಾಲಿಗೆ ಇಲ್ಲದವನು ಅದನ್ನು ಸ್ತುತಿಸಿದ, ಎಂದು ಯೋಗಾನುಭವವನ್ನೂ ಆರಣ್ಯಕವು ಘೋಷಿಸುತ್ತದೆ.

"ಅಂಧೋ ಮಣಿಮವಿನ್ದತ್ । ತಮನಂಗುಲಿರಾವಯತ್ ಅಗ್ರೀವಃ ಪ್ರತ್ಯಮುಂಚತ್ । ತಮಜಿಹ್ವಾ ಅಸಶ್ಚತ ।" ಎಂದೂ ತೈತ್ತಿರೀಯಾರಣ್ಯಕವು ಒಗಟೆ ಮಾತಿನಲ್ಲಿ ಯೋಗಾನುಭವವನ್ನು ನಿರೂಪಿಸುತ್ತದೆ.

"ಯೋಗಾನುಭವದ ವಿಷಯವು ಆರಣ್ಯಕ, ಉಪನಿಷತ್ತುಗಳಲ್ಲಿ ಬರಬಹುದು. ಆದರೆ ಅವು ವೇದದ ಮುಖ್ಯ ಭಾಗಗಳಲ್ಲ. ಇತ್ತೀಚಿನ ಸೇರ್ಪಡೆಗಳು. ಸಂಹಿತೆಯಲ್ಲಿ ಯೋಗದ ವಿಷಯ ಬಂದಿಲ್ಲ." ಎಂದು ಕೆಲವರು ಆಕ್ಷೇಪ ಎತ್ತುತ್ತಾರೆ. ಇದು ವಿವೇಕದ ಮಾತಲ್ಲ. ಏಕೆಂದರೆ ಮಂತ್ರ ಮತ್ತು ಬ್ರಾಹ್ಮಣ ಇವೆರಡೂ ಸೇರಿ ವೇದವೆನಿಸುತ್ತದೆ. "ಮಂತ್ರ ಬ್ರಾಹ್ಮಣಯೋಃ ವೇದ ನಾಮಧೇಯಂ" ಎಂಬುದು ವೈದಿಕ ಮಹರ್ಷಿಗಳ ಅನುಶಾಸನ ಈ ಲಕ್ಷಣದ ಪರಿಧಿಯಲ್ಲಿ ಸಂಹಿತೆ, ಬ್ರಾಹ್ಮಣ ಆರಣ್ಯಕ, ಉಪನಿಷತ್ತು ಎಲ್ಲವೂ ಸೇರುತ್ತವೆ ಎಂಬುದನ್ನು ನಾವು ಗಮನಿಸಬೇಕು. ವೇದದಲ್ಲಿ ಕರ್ಮಕಾಂಡ ಅಥವಾ ಜ್ಞಾನಕಾಂಡ ಯಾವುದಾದರೂ ಒಂದು ಭಾಗವನ್ನು ಮಾತ್ರ ಗೌರವಿಸಿ ಉಳಿದುದನ್ನು ಕಡಗಣಿಸು ವವರನ್ನು ರಾಹು ಮೀಮಾಂಸಕರು, ಅಥವಾ ಕಬಂಧ ಮೀಮಾಂಸಕರು ಎಂದು ಆಚಾರ್ಯರು ಉಪಹಾಸ್ಯ ಮಾಡುತ್ತಾರೆ. ಆದರೂ ಅಲ್ಪ ವಿಚಾರ ಉಳ್ಳವರ ಸಮಾಧಾನಕ್ಕಾಗಿ ("ತುಷ್ಯತು ದುರ್ಜನಃ" ಎಂಬ ನ್ಯಾಯದಂತೆ) ಸಂಹಿತಾ ಭಾಗದಲ್ಲಿಯೂ ಯೋಗವು ನಿರೂಪಿತವಾಗಿರುವುದನ್ನು ಉದಾಹರಿಸಬಹುದು.

೧. ಜ್ಞಾನಿಯಾದ ಪರಬ್ರಹ್ಮ ಸ್ವರೂಪನಾದ ಸವಿತೃ ದೇವನಲ್ಲಿ ಜ್ಞಾನಿಗಳು ಮನಸ್ಸು ಮತ್ತು ಬುದ್ಧಿ ಗಳನ್ನು ಯೋಜಿಸುತ್ತಾರೆ. "ಯುಂಜತೇ ಮನ ಉತಯುಂಜತೇ ಧಿಯೋ ವಿಪ್ರಾ ವಿಪ್ರಸ್ಯ ಬೃಹತೋ ವಿಪಶ್ಚಿತಃ" (ಋ. ಸಂ. ೫–೮೧–೧ ; ತೈ. ಸಂ. ೧–೨–೧೩, ವಾ. ಸಂ. ೫–೧೪)

೨. ನಮಸ್ಕಾರಗಳಿಂದ ನಿಮ್ಮೊಡನೆ ಯೋಗವನ್ನು ಹೊಂದುತ್ತೇನೆ.
"ಯುಜೇ ವಾಂ ಬ್ರಹ್ಮ ಪೂರ್ವ್ಯಂ"
(ಋ. ಸಂ ೧೦–೧೩–೧ ; ತೈ. ಸಂ–೪–೧–೧ ವಾ. ಸಂ. ೧೦–೫, ಅಥರ್ವ ೧೮–೩–೩೯.)

೩. ಪ್ರತಿಯೊಂದು ಯೋಗದಲ್ಲಿಯೂ ಮತ್ತು ಪ್ರತಿ ಕರ್ಮದಲ್ಲಿಯೂ ನಾವು ಸ್ನೇಹಿತರಂತೆ ಪ್ರಾರ್ಥಿಸಿ ಕರೆಯುತ್ತೇವೆ.

"ಯೋಗೇ–ಯೋಗೇ ತವಸ್ತರಂ ವಾಜೇ ವಾಜೇ ಹವಾಮಹೇ"
(ಋ. ಸಂ ೧–೩೦–೭ ; ತೈ. ಸಂ. ೪–೧–೭ ಸಾಮ ೧೬೩–೭೪೩ ;
ಅಥರ್ವ ೨೦–೨೬–೧ ; ವಾ. ಸಂ. ೧೧–೧೪)

೪. ಇದಲ್ಲದೆ ಋಗ್ವೇದ ಸಂಹಿತೆಯು (೧೦–೧೩೬–೪–೫) "ಮುನಿ" ಎಂಬ ಶಬ್ದವನ್ನು ಪ್ರಯೋಗಿಸು ತ್ತದೆ. ಎಲ್ಲ ವೇದ ಸಂಹಿತೆಗಳನ್ನೂ ಅಲಂಕರಿಸುವ ಗಾಯತ್ರಿ ಮಂತ್ರವು ಪರಮಾತ್ಮನ ತೇಜಸ್ಸಿನ ಧ್ಯಾನವನ್ನು ಸ್ಪಷ್ಟವಾಗಿ ಉಲ್ಲೇಖಿಸುತ್ತದೆ.

"ಭರ್ಗೋ ದೇವಸ್ಯ ಧೀಮಹಿ !" ಧಾರಣ ಪೋಷಣಗಳನ್ನು ಮಾಡುವ ಸತ್ಯಸಿದ್ಧಿಯುಳ್ಳ ಭಗವಂತನ ಸುಮತಿಯನ್ನು ನಾವು ಧ್ಯಾನಿಸುತ್ತೇವೆ.

"ವಯಂ ದೇವಸ್ಯ ಧೀಮಹಿ ಸುಮತಿಗ್ಂ ಸತ್ಯರಾಧಸಃ" ಎಂದು ಋಗ್‌ಯಜುಸ್ ಸಂಹಿತೆಗಳು ಹೇಳುತ್ತದೆ. ಯೋಗವಿಲ್ಲದೆ ಮೌನ ಮತ್ತು ಧ್ಯಾನಗಳು ಹೇಗೆ ತಾನೇ ಸಾಧ್ಯವಾಗುತ್ತವೆ. ?

ವೇದ ವೇದ್ಯನಾದ ಯೋಗಪುರುಷನಿಗೆ ನಮ್ಮ ಪ್ರಾಣ–ಪ್ರಣಾಮಗಳು.

ಪ್ರೊ. ಎಚ್. ಎಸ್. ವರದದೇಶಾಚಾರ್ಯರಂಗಪ್ರಿಯ ;
ನಿವೃತ್ತ, ಸಂಸ್ಕೃತ ಪ್ರಾಧ್ಯಾಪಕರು,
ನ್ಯಾಶನಲ್ ಕಾಲೇಜು, ಬೆಂಗಳೂರು

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

"ಓಂ ನಮೋ ಭಗವತೇ ವೇದಾಭರಣಾಯ ವೇದಾತ್ಮನೇ ನಾರಾಯಣಾಯ"

# ಉಭಯ-ಮಿಮಾಂಸಾ-ಸಮನ್ವಯದೃಷ್ಟಿ.

## ಮಂಗಳಾಶಾಸನ

ಅರುಣ ಕಿರಣ ಹಸ್ತೈಃ ಆಶ್ರಿತಾರ್ತಿಂ ನಿವಾರ್ಯ
ಸ್ವಯಂ ಅಖಿಲಗುಣೌಘೈಃ ದೋಷವರ್ಗಂ ವಿಧೂನ್ವನ್
ತ್ರಿಕರಣ ಪರಿಶುದ್ಧಿಂ ಯಃ ತ್ರಿಸಂಧ್ಯಂ ಚ ಕುರ್ಯಾತ್
ಸ ಮಮ ಸಕಲಮೋಹಚ್ಛೇದಕೋ ಭಾಸ್ಕರೋಽವ್ಯಾತ್ ॥

## ವಿಜ್ಞಾಪನ

ಆದರಣೀಯರಾದ ಸಮಸ್ತ ಸಜ್ಜನರಿಗೂ ಸಾಷ್ಟಾಂಗ ದಂಡವತ್ ಪ್ರಣಾಮಗಳನ್ನು ಸಲ್ಲಿಸಿ ವಿಜ್ಞಾಪಿಸಿಕೊಳ್ಳುತ್ತಿದ್ದೇನೆ. ಬಾಲಕನೂ ವಿದ್ವಜ್ಜನರಿಗೆ ನಿತ್ಯಶಿಷ್ಯನೂ ಆದ ನನ್ನನ್ನು ವೇದಾಭರಣ ಪ್ರಾಯರೂ ವೇದ ಪ್ರಕಾಶಕರೂ ಆದ ತಾವು ಸೂರ್ಯನಿಗೆ ದೀಪ ಹಚ್ಚಿಡುವಂತಹ ಈ ಪುಣ್ಯಕಾರ್ಯದಲ್ಲಿ ಯೋಚಿಸಿರುವುದಕ್ಕೆ ಕೃತಜ್ಞನಾಗಿದ್ದೇನೆ.

## ವೇದವಾಙ್ಮಯದ ಸ್ವರೂಪ-ಉದ್ದೇಶ್ಯ

"ಸಾ ಹಿ ಶ್ರೀಃ ಅಮೃತಾ ಸತಾಮ್" ಎಂಬ ವೇದವಚನದಂತೆ ಸಮಸ್ತ ವೇದವಾಙ್ಮಯವೂ ಎಲ್ಲ ಸಜ್ಜನರ ಎಲ್ಲ ವಿಧವಾದ ಶಾಶ್ವತ ಐಶ್ವರ್ಯ. ವೇದವಾಙ್ಮಯವು ಎಂದೂ ಒಂಟಿಯಲ್ಲ. ಸ್ವತಃ ನಾಲ್ಕು ವಿಭಕ್ತರೂಪದಲ್ಲಿರುವ ಇದಕ್ಕೆ ಆರು ಅಂಗಗಳೂ ನಾಲ್ಕು ಉಪಾಂಗಗಳೂ ಅನೇಕ ರಹಸ್ಯಗಳೂ ಇವೆ. ಅನಾದಿ ಉಪದೇಶ ಸಂಪ್ರದಾಯ ಪರಂಪರಾ ರೂಪದಿಂದ ಅವಿಚ್ಛಿನ್ನವಾಗಿ ಅನೇಕ ಸದಸತ್ ವಿಷಯಗಳನ್ನೂ ಪರಿಶುದ್ಧಗೊಳಿಸುತ್ತಾ ಸಮಾಜವನ್ನು ಸಕಲವಿಧ ಯೋಗಕ್ಷೇಮಗಳಿಂದ ಕೂಡಿಸಿ ಬಾಳಿಸಿ "ಮೋಕ್ಷ" ಎಂಬ ಪರಮ ಪುರುಷಾರ್ಥದ ಕಡೆಗೆ ಒಯ್ದು ಸಾಗುವ ಇದು ಗಂಗೆಯಷ್ಟೇ ಪರಮ ಪವಿತ್ರವಾಹಿನಿ.

## ವೇದವಾಙ್ಮಯದ ವಿಭಾಗಗಳು

"ಮಂತ್ರ ಬ್ರಾಹ್ಮಣಯೋಃ ವೇದನಾಮಧೇಯಮ್" ಎಂಬುದು ವೇದಾಂಗವಾದ ಕಲ್ಪಸೂತ್ರ ಪ್ರಾತಿಶಾಖ್ಯಗಳ ವಚನ. ಹೀಗೆ ಒಂದು ಮಹಾವಾಙ್ಮಯದಲ್ಲಿ ಎರಡು ಭಾಗಗಳುಂಟು. ಮಂತ್ರ ಘಟಿತವಾಗಿರುವ 'ಸಂಹಿತಾ' ಭಾಗವು ಮೊದಲು, ಮಂತ್ರ ವಿವರಣ ಘಟಿತವಾದ "ಬ್ರಾಹ್ಮಣ" ಭಾಗವು ನಂತರವೂ ಪರಿಕ್ಲಪ್ತವಾಗಿದೆ. ಈ ಬ್ರಾಹ್ಮಣ ಭಾಗದಲ್ಲೇ 'ಆರಣ್ಯಕ' ಎಂಬ ಉಪವಿಭಾಗವೂ, ಅದರಲ್ಲಿ 'ಉಪನಿಷತ್' ಎಂಬ ಅಂತರ್ವಿಭಾಗವೂ ಇರುವುದು. ವೇದವೃಕ್ಷದ ಋಕ್-ಯಜುಸ್-ಸಾಮ ಅಥರ್ವ-ಎಂಬ ಮುಖ್ಯ ಶಾಖೆಗಳಿಗೆ ಸೇರಿದ ಸಮಸ್ತ ಉಪಶಾಖೆಗಳಲ್ಲೂ ಇದೇ ಕ್ರಮ ಇರುವುದು.

ಸಂಹಿತಾ ಭಾಗವನ್ನು 'ಕರ್ಮಕಾಂಡ' ಎಂದೂ 'ಉಪನಿಷತ್' ಭಾಗವನ್ನು 'ಬ್ರಹ್ಮಕಾಂಡ' ಎಂದೂ ಋಷಿಗಳು ಹೆಸರಿಸಿ, ಈ ಮಧ್ಯೆ "ದೇವತಾಕಾಂಡ" ಎಂಬ ಘಟಕವನ್ನೂ ವ್ಯವಸ್ಥೆಗೊಳಿಸಿರುವರು. ಕರ್ಮಕಾಂಡಕ್ಕೆ ಅನುಬಂಧರೂಪವಾದ ಇದು ಸಂಹಿತಾ ಬ್ರಾಹ್ಮಣಗಳೆರಡರಲ್ಲೂ ಸೇರಿರುವುದು.

ಪರಮಾತ್ಮ ಎಂಬ ಪರಮೋತ್ಕೃಷ್ಟವಾದ ದೇವತಾತತ್ತ್ವದ ನಿರೂಪಣೆಯು ಬ್ರಹ್ಮಕಾಂಡದ ಮುಖ್ಯ ವಿಷಯ. ಉತ್ಕೃಷ್ಟ–ಅಪಕೃಷ್ಟ–ಮಧ್ಯಮ–ಎಂಬ ತ್ರಿವಿಧ ದೇವತಾ ತತ್ತ್ವ ವಿವರಣೆ ದೇವತಾಕಾಂಡದ ಮುಖ್ಯ ವಿಷಯ. ಆರಾಧ್ಯವಾದ ದೇವತಾ ತತ್ತ್ವಗಳ ವಿವಿಧ ಆರಾಧನಾ ಪ್ರಕಾರ ಗಳಾದ ಯಜ್ಞಾದಿ ತತ್ತ್ವಗಳ ವಿಕಾಸ ವ್ಯವಸ್ಥಾಪನೆಯೇ ಕರ್ಮಕಾಂಡದ ಮುಖ್ಯ ವಿಷಯ.

## ವೇದವಾಙ್ಮಯದ ಏಕವಾಕ್ಯತೆ

ವೇದದ 'ಮಂತ್ರ' ಭಾಗಕ್ಕೆ ಸಹಜ ಮತ್ತು ಪ್ರಪ್ರಥಮ ವ್ಯಾಖ್ಯಾನವೇ 'ಬ್ರಾಹ್ಮಣ' ಭಾಗ. ಇವೆರಡೂ ಎಂದಿಗೂ ಪರಸ್ಪರ ಸಾಪೇಕ್ಷವಾಗಿಯೇ ಇವೆ. ಪರಮ ಮೀಮಾಂಸಕರ ಪರಮ ಪ್ರಧಾನ ಸಿದ್ಧಾಂತವಾದ "ಏಕವಾಕ್ಯತೆ" ಎಂಬುದೇ ಈ ವೈದಿಕವಾಙ್ಮಯದ ಸಹಜವಾದ ತತ್ತ್ವ ಎನಿಸುವುದು.

"ಯಥಾ ರಾಜಾ ತಥಾ ಪ್ರಜಾಃ" ಎಂಬಂತೆ ಪ್ರಧಾನವಾದ ವೇದವಾಙ್ಮಯದ ಸ್ವರೂಪಕ್ಕೆ ತಕ್ಕಂತೆ ಅದರ ಅಂಗೋಪಾಂಗಗಳ ಸ್ವರೂಪವೂ ವಿಚಾರಗಳೂ ವ್ಯವಸ್ಥಿತವಾಗಿವೆ. ಸಮಸ್ತ ಶಾಸ್ತ್ರಾರ್ಥಗಳೂ ವ್ಯವಸ್ಥಿತ ವಿಕಲ್ಪದಿಂದ ಅವಿರೋಧವಾಗಿಯೇ ಕೂಡಿ ಬಾಳುತ್ತಿವೆ ಎಂಬುದು ಇದರ ತಾತ್ಪರ್ಯ. ಉದಾ—

"ರಾಮಮೇವಾನುಪಶ್ಯಂತೋ ನಾಭ್ಯಹಿಂಸನ್ ಪರಸ್ಪರಮ್"

ಶ್ರೀರಾಮಚಂದ್ರನ ಮುಖೋಲ್ಲಾಸವೊಂದರಲ್ಲೇ ದೃಷ್ಟಿಯಿಟ್ಟು ಸಮಸ್ತ ಪ್ರಜೆಗಳೂ ತಮ್ಮ ಅನೇಕ ವೈಯಕ್ತಿಕ–ಸ್ಥೂಲ–ಸೂಕ್ಷ್ಮಭಿನ್ನತೆಗಳನ್ನೂ ಬದಿಗಿರಿಸಿ ಯಾರಿಗೂ ಯಾರೂ ಕಿಂಚಿತ್ತೂ ಹಿಂಸಕರವಾಗಿ ನಡೆದುಕೊಳ್ಳುತ್ತಿರಲಿಲ್ಲ. ಇದು ವೇದವೇದ್ಯನಾದ ರಾಮನ ರಾಜ್ಯಸ್ಥಿತಿ.

ಪರಮಾತ್ಮ ತತ್ತ್ವ ವಿಚಾರಕ್ಕೆ ಹೊಂದದೇ ಯಾವುದೇ ವಿಚಾರ ವೇದದಲ್ಲಿರುವುದಿಲ್ಲ. ಪರಮಾತ್ಮ ತತ್ತ್ವವು ಸ್ವತಃ ಎಲ್ಲವನ್ನೂ ಸಮನ್ವಯಗೊಳಿಸಿ ಬಿಡುತ್ತದೆ. ಇತರ ವಿಚಾರಗಳೆಷ್ಟೇ ಇದ್ದರೂ ತ್ಯಾಗಾರ್ಹ ಮತ್ತು ಸ್ವೀಕಾರಾರ್ಹವಾದ ವಿಚಾರಗಳು ಎಂದಿಗೂ ಲಕ್ಷ್ಯಸಿದ್ಧಿಗೆ ಸಹಾಯಕಗಳೇ ಆಗಿ ಬಿಡುತ್ತವೆ. ಯಾವ ಶಾಸ್ತ್ರಾರ್ಥಗಳಿಗೂ ಯಾವ ಮತದರ್ಶನಗಳಿಗೂ ವಾದ ವಿವಾದ ಕೋಲಾಹಲ ಕೋಪ ಪ್ರಸಕ್ತಿಗಳೇ ಇರುವುದಿಲ್ಲವೆಂದರೆ ಅದು ವೈದಿಕ ಸಾಹಿತ್ಯದ ಉತ್ತಮೋತ್ತಮ ಸಮನ್ವಯ, ಸಮನ್ವಯ ದೃಷ್ಟಿಯ ಫಲ ಎನ್ನಬಹುದು.

## ವೇದವಾಙ್ಮಯದ ಭಾಷಾರೂಪ ಸಮಸ್ತ

"ವೇದವೃಕ್ಷಃ" ಎಂಬ ಪ್ರಾಚೀನ ಗ್ರಂಥದಲ್ಲಿ ಪೃಥ್ವಿಯ ದ್ವೀಪ, ದ್ವೀಪಾಂತರಗಳಲ್ಲಿ ಪ್ರಚಾರ ದಲ್ಲಿದ್ದ ಆಯಾ ವೇದ ಶಾಖೆಗಳ ಮತ್ತು ಪ್ರವರ್ತಕ ಋಷಿಗಳ ವಿವರಗಳಿವೆ. ಪ್ರಸಂಗಾತ್ "ಕಾಠಕ" ಎಂಬ ಶಾಖೆಯು ದ್ವೀಪಾಂತರಗಳಲ್ಲಿ ಹೆಚ್ಚು ಬಳಕೆಯಲ್ಲಿದ್ದುದಾಗಿ ತಿಳಿದು ಬರುವುದು. ಇಂದು ಆ ಶಾಖೆಯ ಮೂರು ಅಧ್ಯಾಯಗಳು ಮಾತ್ರ ಕೃಷ್ಣಯಜುಸ್ ಶಾಖೆಯವರು ಕಲಿತು ರಕ್ಷಿಸಿರುವದರಿಂದ ಉಳಿದುಕೊಂಡಿದೆ. ಸಹಸ್ರಾರು ವೇದಶಾಖೆಗಳ ನಷ್ಟವನ್ನು ಪರಿಗಣಿಸಿದರೆ ಅದೇ ಒಂದು ಮಹಾ ಗ್ರಂಥವಾಗುವುದು.

ನಿತ್ಯನೂತನನಾದ ಪರಮಾತ್ಮನು ನಿತ್ಯನೂತನವಾದ ವೇದಸಾಹಿತ್ಯವನ್ನು ಆಯಾ ದೇಶ ಕಾಲಾನು ಸಾರವಾಗಿಯೂ ಆಯಾ ವ್ಯಕ್ತಿಗಳ ಉಪಯೋಗಾರ್ಥವಾಗಿಯೂ ಸಮಸ್ತ ಜಗತ್ತಿನ ಯೋಗ ಕ್ಷೇಮಾರ್ಥ ವಾಗಿಯೂ ಸಾಕ್ಷಾತ್ಕಾರಗೊಳಿಸಿಕೊಡುವನು ಎಂಬುದು ಸಾಂಗೋಪಾಂಗವಾದ ವೈದಿಕ ಸಾಹಿತ್ಯದ

ಅಪ್ರತಿಹತವಾದ ವಿಷಯು. ಇದರಲ್ಲಿ ಭಾಷೆಯ ವ್ಯತ್ಯಾಸ ಇದ್ದರೂ ಬಾಧಕವಿಲ್ಲ.

ಆಧುನಿಕ ವಿಮರ್ಶಕರ ಯಾವುದೋ ದೃಷ್ಟಿಯಲ್ಲಿ ಉಪನಿಷತ್ತುಗಳೆಲ್ಲ ಭಾಷೆಯ ಆಕಾರದಲ್ಲಿ ಸೂಕ್ಷ್ಮ ವ್ಯತ್ಯಾಸ ಪಡೆದಿರುವುದರಿಂದ ಇವುಗಳಲ್ಲೇ ಪ್ರಾಚೀನ ನವೀನ ಎಂಬ ವಿಭಾಗ ಮಾಡುವ ಪದ್ಧತಿ ಆರಂಭವಾಗಿದೆ. 'ಸಂಹಿತಾ' ಸಾಹಿತ್ಯಕ್ಕಿಂತ 'ಬ್ರಾಹ್ಮಣ' ಸಾಹಿತ್ಯ ನವೀನ ಎಂದು ಹೇಳಲು ಭಾಷಾ ತಾರತಮ್ಯವನ್ನೂ ಒಂದು ಕಾರಣವನ್ನಾಗಿ ಅವರು ಉಪಯೋಗಿಸುತ್ತಿದಾರೆ.

ಸಾಂಗೋಪಾಂಗವೂ ಸರಹಸ್ಯವೂ ಆದ ವೈದಿಕ ಸಾಹಿತ್ಯದ ಅನಾದಿ–ಅವಿಚ್ಛಿನ್ನ–ಉಪದೇಶ ಸಂಪ್ರದಾಯ–ಪರಂಪರಾ–ಗತವಾದ ಸತ್ಯದೃಷ್ಟಿಯಲ್ಲಿ ನವೀನವಾದವುಗಳೂ ಅವರು ಕೊಡುವ ಕಾರಣಗಳೂ ವ್ಯರ್ಥ ಮತ್ತು ಪ್ರತಿಹತ. ಇಂತಹ ನವೀನ ದೃಷ್ಟಿಯವರಾರೂ ಸಾಂಗೋಪಾಂಗ ಸರ್ವ-ವೈದಿಕ ಸಾಹಿತ್ಯ ಸಾಕ್ಷಾತ್ಕಾರ ಸಂಪನ್ನರಲ್ಲ, ಹಾಗೆ ಅಧ್ಯಯನ ಮಾಡಿದವರೂ ಅಲ್ಲ ಎಂಬುದು ಬಹಳ ಮುಖ್ಯ ಗಮನಾರ್ಹವಾದ ಅಂಶ.

ಇಲ್ಲಿ ನಾವು ಹೇಳುವ ಈ ಮಾತುಗಳಿಂದ ನಮ್ಮನ್ನು ವಾಚಕರು ಸರ್ವಸಾಕ್ಷಾತ್ಕಾರ ಸಂಪನ್ನರೆಂದು ಭಾವಿಸಬಾರದು. ಪ್ರಕೃತ ವಿಷಯದಲ್ಲಿ ಪೂರ್ವಾಚಾರ್ಯರ ಆಯಾ ಶಾಸ್ತ್ರ ಸಮ್ಮತವಾದ ನಿರ್ದುಷ್ಟ ನಿಷ್ಕೃಷ್ಟ–ಶಿಷ್ಟ ರೀತಿಯ ಅಭಿಪ್ರಾಯಗಳನ್ನು ತಿಳಿದಷ್ಟು ಮಟ್ಟಿಗೆ ತಿಳಿಸುವ ಇಂತಿಷ್ಟು ಭಾಗ್ಯವನ್ನಾದರೂ ಪಡೆದವರು ಎಂದಷ್ಟೇ ಬಿನ್ನವಿಸುತ್ತೇವೆ.

## ಜ್ಞಾನಕರ್ಮಗಳ ಸಮಾನಾಂತರ

'ಜ್ಞಾನಕಾಂಡ'ದ ಬ್ರಹ್ಮವಿಚಾರವನ್ನು ವೇದವಾಙ್ಮಯದ ಮುಖ್ಯ ವಿಚಾರ ನಿರ್ಣಯವೆಂದು ಗ್ರಹಿಸಿದ ಮಹರ್ಷಿಗಳು ಉಪನಿಷತ್ ರಹಸ್ಯಗಳಿಗೆ 'ವೇದಾಂತ' ಎಂಬ ಹೆಸರನ್ನು ಅತ್ಯಂತ ಉಚಿತ ರೀತಿಯಲ್ಲಿ ಕೊಟ್ಟಿರುವರು. ವೇದ = ವೇದಗಳ, ಅಂತ = ನಿರ್ಣಯ ಎಂಬುದೇ ಇದರ ಅರ್ಥ. ಒಂದೊಂದು ಉಪನಿಷತ್ ಗ್ರಂಥವೂ ಒಂದೊಂದು ವೇದಾಂತ. ಅಂದರೆ ಒಂದೊಂದು ವೇದಶಾಖೆಯಲ್ಲೂ ಅರಳಿರುವ ಒಂದೇ ವೃಕ್ಷದ ಒಂದೊಂದು ಪುಷ್ಪ ಆ ಶಾಖೆಯ ಸಾರವೇ ಅದು. ಗುಣ ಸ್ವಭಾವಗಳಲ್ಲಿ ಇತರ ಶಾಖೆಯ ಉಪನಿಷತ್‌ಗಳಿಗೆ ಸಮಾನವೇ ಆಗಿದ್ದು ಫಲವಿಷಯದಲ್ಲೂ ಸಮಾನ ರಸ ಘನವಾಗಿರುವುದು ಇದರ ವೈಶಿಷ್ಟ್ಯ. 'ಕರ್ಮಕಾಂಡ'ದ ಯಜ್ಞಾದಿ ವಿಚಾರಗಳನ್ನು ಮಹರ್ಷಿಗಳು ಕಡೆಗಣಿಸಿಲ್ಲ. "ಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ" "ಕ್ರಿಯಾವನ್ತಃ ಶ್ರೋತ್ರಿಯಾಃ ಬ್ರಹ್ಮನಿಷ್ಠಾಃ" ಮುಂತಾದ ವಚನಗಳಿಂದ ವೇದ ಸಾಹಿತ್ಯವು ಬ್ರಹ್ಮಜ್ಞಾನಕ್ಕೆ ಸಮಾನಾಂತರವಾಗಿ ಯೋಗರೂಪವಾದ ಕರ್ಮವನ್ನು ನಿರ್ದೇಶಿಸಿದೆ.

"ಉಭಾಭ್ಯಾಮೇವ ಪಕ್ಷಾಭ್ಯಾಂ ಯಥಾ ಖೇ ಪಕ್ಷಿಣಾಂ ಗತಿಃ
ತಥೈವ ಜ್ಞಾನ ಕರ್ಮಭ್ಯಾಂ"

ಎಂಬ ಸ್ಮೃತಿ ವಚನವೂ ಇದನ್ನು ಪುಷ್ಟೀಕರಿಸುತ್ತದೆ. ಒಂದೇ ರೆಕ್ಕೆಯಲ್ಲಿ ಪಕ್ಷಿಯು ಹಾರಲಾರದು. ಎರಡು ರೆಕ್ಕೆಗಳೂ ಪರಸ್ಪರ ಸಾಪೇಕ್ಷವಾಗಿವೆ ಎಂಬಂತೆ ಕರ್ಮಜ್ಞಾನಗಳ ಸಮಾನಾಂತರ ಸ್ಥಿತಿ ಎಂದಷ್ಟೇ ಇದರ ಭಾವಾರ್ಥ.

## ಕರ್ಮ ಜ್ಞಾನಗಳ ಅಂಗಾಂಗಿ ಭಾವ

ವೇದ ಸಂಹಿತಾ ಭಾಗದಲ್ಲೇ ಇರುವ ಉಪನಿಷತ್ತೆಂದರೆ 'ಈಶಾವಾಸ್ಯ' ಎಂಬುದು ಒಂದೇ. ಇದರಲ್ಲಿ ಮೇಲ್ಕಂಡ ಕರ್ಮಜ್ಞಾನಗಳ ಸಮಾನಾಂತರವನ್ನೂ "ಅಂಗಾಂಗಿ ಭಾವ" ಎಂಬ ಹೊಂದಾಣಿಕೆ ಯನ್ನೂ ಸ್ಪಷ್ಟವಾಗಿ ತಿಳಿಯಬಹುದು. ಅನೇಕ ಮತಾಚಾರ್ಯರ ವಿಭಿನ್ನ ಅಂಶ ಪ್ರಧಾನವಾದ ಭಾಷ್ಯ ಗಳನ್ನು ಒಂದು ವೇಳೆ ನಾವು ಗಮನಿಸದಿದ್ದರೂ ಬಾಧಕವಿಲ್ಲ. ಆದರೆ ಯಾವ ಮಂತ್ರ ಪ್ರಭಾವಕ್ಕೂ ಒಳಗಾಗದವರ ವೇದಶಾಸ್ತ್ರ ಭಾಷ್ಯ ವ್ಯಾಖ್ಯಾನಗಳನ್ನು ಅತ್ಯವಶ್ಯ ಗಮನಿಸುವುದು ಒಳಿತು. 'ಈಶಾವಾಸ್ಯ' ಮಂತ್ರದ್ರಷ್ಟಾ ಆದ ಯಾಜ್ಞವಲ್ಕ್ಯ ಮಹರ್ಷಿಗಳ "ಸ್ಮೃತಿ" ಗ್ರಂಥಕ್ಕೆ 'ಶಿಲಾಹಾರ' ವಂಶದ ಮಹಾರಾಜ "ಅಪರಾದಿತ್ಯ"ನು ವ್ಯಾಖ್ಯಾನಿಸುವಾಗ ಈಶಾವಾಸ್ಯದ ಮಂತ್ರವನ್ನು ಉದ್ಧರಿಸಿ ವಿವರಿಸಿರುವುದಿದೆ.

ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಹ ।
ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽ ಮೃತಮಶ್ನುತೇ ॥

ವಿದ್ಯಾ = (ಭಕ್ತಿಯೆಂಬ) ವಿಶೇಷ ರೀತಿಯ ಜ್ಞಾನವು ಅಂಗಿ. ಅವಿದ್ಯಾ= (ಭಕ್ತಿಗೆ) ಅವಶ್ಯ ಕರ್ತವ್ಯಗಳೆಲ್ಲವೂ—ಅಂಗ. ಇವೆರಡೂ ಉಭಯಂ = ಒಂದರಿಂದ ಮತ್ತೊಂದನ್ನು ಬೇರ್ಪಡಿಸಲಾಗ ದಂತಹ ಸೂಕ್ಷ್ಮ ತತ್ತ್ವಗಳು ಇವೆರಡನ್ನೂ ಸಹ = ಪ್ರತ್ಯೇಕವಾಗಿ ವಿಚಾರ ಮಾಡದೆ ಜೊತೆಜೊತೆ- ಯಾಗಿಯೇ ತಿಳಿಯಬೇಕಲ್ಲದೆ "(ವಿದ್ಯಾಂ) ಚ = ವಿದ್ಯೆಯ ಬಗ್ಗೆ ಇನ್ನೂ ಇರುವ 'ಸಹಕಾರಿ' (ಪಾಂಡಿತ್ಯ- ಬಾಲ್ಯ-ಮೌನ) ಗಳನ್ನೂ "(ಅವಿದ್ಯಾಂ) ಚ = ಕರ್ಮದ ಬಗ್ಗೆ ಇರುವ (ಉದ್ಗೀಥ ವಿದ್ಯಾದಿ) ಸಹಕಾರಿ ಗಳನ್ನೂ 'ಯಃ ವೇದ' = ಯಾವನು ತಿಳಿಯುವನೋ (ಯಂಃ) = ಅವನು "ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯೆಯಾಽಮೃತಮಶ್ನುತೇ" = ಸಂಸಾರ ಬಂಧದಿಂದ ಹೊರಬಿದ್ದು ಅಮೃತರೂಪವಾದ 'ಮೋಕ್ಷ'ವೆಂಬ ಪುರುಷಾರ್ಥವನ್ನು ಪಡೆಯುವನು.

## ಮೀಮಾಂಸಾ ಗ್ರಂಥಗಳ ಸ್ವರೂಪ-ಉದ್ದೇಶ್ಯ

ವೈದಿಕ ವಾಙ್ಮಯಕ್ಕೆ ಸುವ್ಯವಸ್ಥಿತವಾಗಿ ಅರ್ಥನಿರ್ಣಯ - ಮಾಡಲು ಉಪಾಂಗವಾದ "ಮೀಮಾಂಸಾ" ಶಾಸ್ತ್ರವು ಪರಂಪರೆಯಾಗಿ ಕಾಲಕಾಲಕ್ಕೆ ಮಹರ್ಷಿಗಳಿಂದ ಸೂತ್ರ ರೂಪದಲ್ಲಿ ರಚಿತ ವಾಗಿ ಬರುತ್ತಿದೆ. ಆಗಿಹೋದ ಮೀಮಾಂಸಾಚಾರ್ಯರು ಅನೇಕರುಂಟು. ಅವರೆಲ್ಲರ ಗ್ರಂಥ ಈಗ ಉಪಲಬ್ಧವಿರದು. ಆದರೂ ಅವರ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ವಿಮರ್ಶಿಸಿ ಸೂಕ್ತ ಸೂಚನೆ ನೀಡುವ "ಪೂರ್ವ ಮೀಮಾಂಸಾ, ಉತ್ತರ ಮೀಮಾಂಸಾ" ಈ ಯುಂಗದಲ್ಲಿ ಪರಂಪರೆಯಾಗಿ ಅಧ್ಯಯನ ಅಧ್ಯಾಪನ ಕ್ರಮದಲ್ಲಿ ಸುರಕ್ಷಿತವಾಗಿವೆ.

ವೇದಕ್ಕೆ ಉಪಾಂಗವಾದ ಮೀಮಾಂಸಾವನ್ನು ಒಂದೇ ಉದ್ದೇಶ್ಯದಿಂದ ಆಚಾರ್ಯರಾದ ವೇದ- ವ್ಯಾಸರೂ ಶಿಷ್ಯರಾದ ಜೈಮಿನಿಯೂ ಮಿತ್ರರಾದ ಕಾಶಕೃತ್ಸ್ನರೂ ಸೇರಿ ಕರ್ತವ್ಯ ವಿಚಾರಗಳನ್ನು ವಿಭಾಗಿಸಿಕೊಂಡು "ಟೀಂ ವರ್ಕ್" 'ಸತ್ರಯಾಗ' ಮಾಡುವಂತೆ ಮಾಡಿರುವರು ಏಕೋದ್ದೇಶ್ಯ ಏನೆಂದರೆ "ಮೋಕ್ಷ" ಎಂಬ ಪರಮ ಮತ್ತು ಚರಮವಾದ ಪುರುಷಾರ್ಥ. ಇದನ್ನು ಸಾಧಿಸಲು ಬೇಕಾದ ಸಾಧನಗಳು ಅಂಗ-ಅಂಗಿ ಎಂಬುದಾಗಿ ಪ್ರತ್ಯೇಕ ಎರಡು ವಿಭಾಗಗಳಲ್ಲಿ ವಿಮರ್ಶಿಸಲ್ಪಡುತ್ತವೆ. ಕರ್ಮವು ಅಂಗ, ಜ್ಞಾನವು ಅಂಗಿ. ಅಂಗಿ ಎಂದರೆ ಪ್ರಧಾನ, ಅಂಗ ಎಂದರೆ ಸಹಾಯಕ. ಅಂಗ- ವಿಲ್ಲದುದು ಎಂದಿಗೂ ಅಂಗಿ ಎನಿಸುವುದಿಲ್ಲ. ಒಂದು ಅಂಗಿ ಇಲ್ಲದಿದ್ದರೆ ಸಹಾಯಕಗಳು ಅಂಗ

ಎನಿಸುವುದಿಲ್ಲ. ಈ ಸರಳ ತತ್ತ್ವವನ್ನು ಗಮನಿಸಿಯೇ "ವೇದ" ಎಂಬ ಜ್ಞಾನಪ್ರಧಾನ ಸಾಹಿತ್ಯವನ್ನು ಜ್ಞಾನಕಾಂಡವೆಂದೂ ಕರ್ಮಕಾಂಡವೆಂದೂ ವಿಚಾರ ಸೌಕರ್ಯಕ್ಕಾಗಿ ಮಾತ್ರ ವಿಭಾಗ ಮಾಡಲಾಗಿದೆ. ಸರಕಾರದ ಡಿಪಾರ್ಟ್‌ಮೆಂಟಗಳಲ್ಲಿ ಪರಸ್ಪರ ಹೊಂದಾಣಿಕೆ ಇರುವಂತೆ ಮೀಮಾಂಸಾ ಶಾಸ್ತ್ರದ ಭಾಗಗಳಲ್ಲೂ ಹೊಂದಾಣಿಕೆ ಬಹಳ ಮುಖ್ಯವಾಗಿದೆ. ಪೂರ್ವಮೀಮಾಂಸೆಯು ಗ್ರಂಥ ಹದಿನಾರು ಅಧ್ಯಾಯ. ಇದರಲ್ಲಿ ಜೈಮಿನಿ ರಚಿತ ಹನ್ನೆರಡು ಅಧ್ಯಾಯ. ಇದಕ್ಕೆ 'ಕರ್ಮಕಾಂಡ' ಎಂದು ಹೆಸರಿದೆ. ನಂತರ ನಾಲ್ಕು ಅಧ್ಯಾಯಗಳು 'ಕಾಶಕೃತ್ಸ್ನ' ವಿರಚಿತ. ಇದಕ್ಕೆ 'ದೇವತಾಕಾಂಡ'ವೆಂದು ಹೆಸರು. ನಂತರದ ಭಾಗವೇ ಉತ್ತರ ಮೀಮಾಂಸೆ ಎಂಬ ಪ್ರಸಿದ್ಧವಾದ ಬ್ರಹ್ಮಸೂತ್ರ ಗ್ರಂಥ. ಇದೂ ನಾಲ್ಕು ಅಧ್ಯಾಯ. ಇದೂ ವೇದವ್ಯಾಸರಿಂದ ಪ್ರಣೀತವಾದುದು. ಹೀಗೆ ಇಪ್ಪತ್ತು ಅಧ್ಯಾಯಗಳ ಈ ಶಾಸ್ತ್ರವು ಮಧ್ಯಕಾಲದಲ್ಲಿ "ದೇವತಾಕಾಂಡ"ದ ಅಧ್ಯಯನ ಕ್ರಮವು ಕುಂಠಿತವಾದ್ದರಿಂದ ಕೊನೆಯ ಬ್ರಹ್ಮಕಾಂಡಕ್ಕೂ ಮೊದಲ ಕರ್ಮಕಾಂಡಕ್ಕೂ ಈ ಘಟಕವಿಲ್ಲದ ಕಾರಣ ಸಂಬಂಧವು ಬಿಟ್ಟುಹೋಗಿ ಪ್ರತ್ಯೇಕತೆ ಬೆಳೆಯಿತು. ಎಷ್ಟರ ಮಟ್ಟಿಗೆ ಎಂದರೆ ವೇದವೇ ಬೇರೆ, ವೇದಾಂತವೇ ಬೇರೆ ಎನ್ನುವಷ್ಟು, ಬ್ರಹ್ಮವೇ ಇಲ್ಲ ಕರ್ಮವೇ ಬೇಡ ಎನ್ನುವಷ್ಟು. ಇದು ವೇದ ಸಾಹಿತ್ಯದ ವಿವರಣೆಯು ಏಕದೇಶಕ್ಕೆ ಲೌಕಿಕವಾಗಿ ದೊರೆತ ಮನ್ನಣೆಯ ಕಾರಣದಿಂದಾದದ್ದು. ಇದು ಶಾಸ್ತ್ರೀಯ ಭಿನ್ನತೆಯಲ್ಲ.

ಮೂಲವಾದ ವೇದದ ವಿಷಯಗಳೆನಿಸಿದ ಕರ್ಮಜ್ಞಾನಗಳು ಹಾಸು ಹೊಕ್ಕಾಗಿರುವಂತೆ ಅವುಗಳ ವ್ಯವಸ್ಥಿತ ವಿವರಣಾರ್ಥವಾಗಿ ಹೊರಟ ಉಭಯ ಮೀಮಾಂಸೆಗಳೂ ಹಾಸು ಹೊಕ್ಕಾಗಿ ನೂಲುಗಳು (ಸೂತ್ರ) ಒಂದು ವಸ್ತ್ರವಾಗಿರುವಂತೆಯೇ ಒಂದಾಗಿವೆ. ಈ ಅಂಶವನ್ನು ಯಾಜ್ಞವಲ್ಕ್ಯಾದಿ ಮಹರ್ಷಿಗಳು ವೇದೋಪ ಬೃಂಹಣವಾದ ತಮ್ಮ "ಸ್ಮೃತಿ" ಗ್ರಂಥಗಳಲ್ಲಿ ಸ್ಪಷ್ಟ ಪಡಿಸಿರುವರು.

"ಪುರಾಣ ನ್ಯಾಯ–ಮೀಮಾಂಸಾ–ಧರ್ಮಶಾಸ್ತ್ರಾಂಗ ಮಿಶ್ರಿತಾಃ"
ವೇದಾಃ ಸ್ಥಾನಾನಿ ವಿದ್ಯಾನಾಂ ಧರ್ಮಸ್ಯ ಚ ಚತುರ್ದಶ ॥
"ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ।
ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾಹ್ಯೇತಾಶ್ಚತುರ್ದಶ ॥"

ಮಧ್ಯಸ್ಥಾವಾದ ಇತರ ಶಾಸ್ತ್ರಜ್ಞರೂ ಸಹ ವಿದ್ಯೆಗಳ ಬಗ್ಗೆ ತಿಳಿಸುವಾಗ "ಈ ಮೀಮಾಂಸಾ" ಎಂಬುದು ಒಂದೇ ಎಂಬ ನಿರ್ಣಯವನ್ನೇ ಅನುಸರಿಸಿರುವರು. ಉದಾ—ಅಲಂಕಾರ ಶಾಸ್ತ್ರ ಪ್ರವರ್ತಕರಲ್ಲಿ ಒಬ್ಬನಾದ ರಾಜಶೇಖರನು ತನ್ನ ಕಾವ್ಯ ಮೀಮಾಂಸೆಯಲ್ಲಿ ಮೇಲಿನ ಋಷಿ ವಚನಗಳನ್ನೇ ಅನುಸರಿಸಿರುವನು.

ಮೇಲಿನ ವಚನಗಳಲ್ಲಿ ಸಾಂಗೋಪಾಂಗವಾದ ವೇದವಾಙ್ಮಯದ ಮುಖ್ಯೋದ್ದೇಶ ಧರ್ಮ ಎಂದು ಸ್ಪಷ್ಟಪಡಿಸಲಾಗಿದೆ, ಸಾಧ್ಯ ಧರ್ಮವು ಕರ್ಮ, ಸಿದ್ಧ ಧರ್ಮವು ಬ್ರಹ್ಮ, ಎಂದು ವಿಂಗಡಿಸ–ಬಹುದಾದರೂ ಇವುಗಳಲ್ಲಿ—"ರಾಮೋ ವಿಗ್ರಹವಾನ್ ಧರ್ಮಃ" "ಕೃಷ್ಣಃ ಧರ್ಮಂ ಸನಾತನಮ್" ಎಂಬ ಇತಿಹಾಸವಚನಗಳಿಂದ ಪ್ರಧಾನ ಧರ್ಮವು ಆರಾಧ್ಯವಾದ ಬ್ರಹ್ಮವೇ ಎಂದೂ ಅದರ ಸಂಬಂಧದಿಂದಲೂ ಪ್ರವರ್ತಕತ್ವದಿಂದಲೂ ಅದರ ಆರಾಧನರೂಪವಾದ ಕರ್ಮಕ್ಕೂ ಧರ್ಮ ಎಂದೇ ಹೆಸರಿಡ–ಲಾಗಿದೆ ಎಂದು ಸ್ಪಷ್ಟವಾಗುವುದು.

ವೇದ–ವೇದಾಂತಗಳು ಒಟ್ಟಿಗೆ ಸೇರಿ ಮೊತ್ತ ಒಂದು "ವೇದಸಾಹಿತ್ಯ ಎನಿಸುವಂತೆ, ಕರ್ಮ–ಬ್ರಹ್ಮ ಮೀಮಾಂಸೆಗಳು ಮೊತ್ತವಾಗಿ ಒಂದು ಮೀಮಾಂಸಾಶಾಸ್ತ್ರ" ಎನಿಸಿ ಒಂದೇ ಉಪಾಂಗವಾಗಿ

ವೇದ ಸಾಹಿತ್ಯದ ಅರ್ಥ ಪ್ರಯೋಗ ವ್ಯವಸ್ಥೆಯನ್ನು ತನ್ನ ಸಹಸ್ರಾಧಿಕ "ಅಧಿಕರಣ ನ್ಯಾಯ"ಗಳಿಂದ ಸಮನ್ವಿತ ರೀತಿಯಲ್ಲಿ ಮಾಡಿಕೊಡುವುದು.

ಈ ಹೊಂದಾಣಿಕೆಯನ್ನೇ "ಸಂಹಿತಮೇತತ್‌ಶಾರೀರಕಂಜೈಮಿನೀಯೇನ ಷೋಡಶ ಲಕ್ಷಣೇನ ಇತಿ ಶಾಸ್ತ್ರೈಕತ್ವ ಸಿದ್ಧಿಃ" ಎಂಬುದಾಗಿ ಭಗವದ್ ರಾಮಾನುಜರು ಪೂರ್ವಾಚಾರ್ಯ ವೃತ್ತಿ ಭಾಷ್ಯ ವಚನಗಳಿಂದ ಸ್ಪಷ್ಟಪಡಿಸಿ ಸಂಶಯ–ಭೇದ–ಭಾವಾಂತರಗಳಿಗೆ ಅವಕಾಶವಿಲ್ಲದಂತೆ ಮಾಡಿರುತ್ತಾರೆ.

## ಮೀಮಾಂಸೆಯ ಮುಖ್ಯಫಲ

ಅಂಗಿಯೆನಿಸುವ ಪ್ರಧಾನ ವಿಷಯಕ್ಕೆ ಯಾವುದು ಫಲವೋ ಅಂಗಗಳಿಗೂ ಅದೇ ಮುಖ್ಯಫಲ ಎಂಬುದು ಮೀಮಾಂಸಾ ಶಾಸ್ತ್ರದ ಒಂದು ಮುಖ್ಯವಾದ ನಿಯಮ. ಇದರಂತೆ ಅಂಗಿಯಾದ ವೇದಕ್ಕೆ ಪ್ರಧಾನ ಫಲವಾದ 'ಮೋಕ್ಷ' ಪುರುಷಾರ್ಥವೇ ಮೀಮಾಂಸೆಗೂ ಪ್ರಧಾನ ಫಲ, ಈ "ಮೋಕ್ಷ" ಎಂಬುದಕ್ಕೆ "ಮುಕ್ತಿಃ ಮೋಕ್ಷಃ ಶುಭಾನಂದಃ" ಎಂಬ ಕೋಶ ವಚನವು ಪರ್ಯಾಯ ಪದಗಳನ್ನು ತಿಳಿಸುತ್ತವೆ. ಶಾಸ್ತ್ರಗಳಲ್ಲಿ "ಬ್ರಹ್ಮಭೂಯಂ" "ಅಮೃತತ್ವ" ಮುಂತಾದ ಪರ್ಯಾಯಗಳೂ ಇವೆ. ಮೋಕ್ಷವೇ ಮಹಾನಂದ ಎಂಬುದನ್ನು ಮೀಮಾಂಸಕರೇ ಸ್ಪಷ್ಟಪಡಿಸಿರುವರು :—

"ಯನ್ನ ದುಃಖೇನ ಸಂಭಿನ್ನಂ ನ ಚ ಗ್ರಸ್ತಮನನ್ತರಮ್
ಅಭಿಲಾಷೋಪನೀತಂ ಚ ತತ್‌ಸುಖಂ ಸ್ವಃ ಪದಾಸ್ಪದಮ್"

## ಉಭಯ ಮೀಮಾಂಸಾ ಸಿದ್ಧಾಂತ

ವೇದಾರ್ಥಗಳು ಅನೇಕವಿದ್ದರೂ ಬ್ರಹ್ಮಪ್ರಾಪ್ತಿ ಎಂಬ ಮುಖ್ಯ ಫಲದ ಕಡೆಗೆ ಸಾಗುವಾಗ ಕೆಲವು ಘಟ್ಟಗಳಲ್ಲಿ ನಿಂತು ಕೆಲವು ಅರ್ಥಗಳನ್ನು ಪರಿಗ್ರಹಿಸಿ ಮುನ್ನಡೆಯಬೇಕಾಗುವುದು. ಈ ಮಜಲು = ಘಟ್ಟಗಳೇ ನಮಗೆ ಮುಖ್ಯವಾಗಬಾರದು. ಸ್ವಾಭಾವಿಕವಾಗಿ ಪರಮಾತ್ಮನೇ ನಮ್ಮನ್ನು ತನ್ನೆಡೆಗೆ ಸೆಳೆಯಲು ಮಾಡುವ ಮಜಲುಗಳಲ್ಲಿ ನಮ್ಮ ಅನ್ವಯ ಅಸ್ತಿತ್ವಗಳಷ್ಟೇ ಸಾಧಕ ನಕಾರಾತ್ಮಕ ನಿಷೇಧವಿಲ್ಲದಿದ್ದರೆ ಸಾಕು, ಅನುಭವಿಸುತ್ತ ಸುಖವಾಗಿ ಸಾಗಬಹುದು

ಇಂತಹ ಮೊದಲ ಮಜಲಿನಲ್ಲಿ ನಾವು ಅನುಭವಿಸಬೇಕಾದುದು ಜೀವಾತ್ಮ–ಪರಮಾತ್ಮರುಗಳ ಸಂಬಂಧ. ಜೀವಾತ್ಮನಿಗೆ ಒಂದು ಶರೀರ ಇದ್ದು ಅದು ಅವನ ವಶದಲ್ಲಿ ನಡೆಯುವಂತೆ ಪರಮಾತ್ಮನಿಗೆ ಈ ಜೀವಾತ್ಮವೂ ಒಂದು ಶರೀರವಾಗಿರುವುದು. ಸಮಸ್ತ ಪದಾರ್ಥಗಳೂ ಪರಮಾತ್ಮನಿಗೆ ಶರೀರಗಳೇ ಆಗಿವೆ. ಅವನು ನಡೆಸಿದಂತೆ ನಡೆಯುವುದಷ್ಟೇ ಇವುಗಳ ಸಹಜ ವರ್ತನೆ. ಸ್ವಾತಂತ್ರ್ಯವು ಶರೀರದ ಲಕ್ಷಣವಲ್ಲ. ಪಾರತಂತ್ರ್ಯವೇ ಪರಮ ಲಕ್ಷಣ. ಈ ತತ್ತ್ವಜ್ಞಾನವು ಶ್ರೀವೈಷ್ಣವರೆಲ್ಲರ ಮೂಲಧನ. ಇದನ್ನು ಆಚಾರ್ಯರು "ಪ್ರಧಾನ ಪ್ರತಿತಂತ್ರಸಿದ್ಧಾಂತ" ಎನ್ನುತ್ತಾರೆ. ಈ ವಿಷಯವು ಅಭಿಪ್ರಾಯ ಭೇದ, ಕಲಹ, ಕೋಲಾಹಲಾದಿಗಳಿಗೆ ಅವಕಾಶವನ್ನೇ ಕೊಡುವುದಿಲ್ಲ. ಆಚಾರ್ಯ ವೇದಾಂತ ದೇಶಿಕರ, ಮಾತಿನಲ್ಲೇ ಇದನ್ನು ಸವಿಯಬೇಕು :—

"ಯದ್ಯೋತಂ ಯತಿಸಾರ್ವಭೌಮ ಕಥಿತಂ ವಿದ್ಯಾದತವಿದ್ಯಾತಮಃ—
ಪ್ರತ್ಯೂಷಂ ಪ್ರತಿತಂತ್ರಮಂತಿಮಯುಗೇ ಕಶ್ಚಿದ್ವಿಪಶ್ಚಿತ್ತಮಃ।
ತತ್ರೈಕತ್ರ ಘುಟಿತ್ಯುಪೈತಿ ವಿಲಯಂ ತತ್ತನ್ಮತಸ್ಥಾಪನಾ —
ಹೇವಾಕಪ್ರಥಮಾವಹೈತುಕಕಥಾ ಕಲ್ಲೋಲಕೋಲಾಹಲಃ ॥"

ಸಮಸ್ತವೂ ಪರಮಾತ್ಮನ ಶರೀರವೆಂದ ಮೇಲೆ ಶರೀರಕ್ಕೆ ಅಪಚಾರ ಮಾಡಿದರೆ ಒಳಗಿನ ಆತ್ಮಕ್ಕೆ ತಟ್ಟುವಂತೆ ವಿಶ್ವದ ಯಾವುದಕ್ಕೆ ಹಿಂಸೆ ಮಾಡಿದರೂ ಅದು ಪರಮಾತ್ಮನಿಗೆ ತಟ್ಟುವ ಹಿಂಸೆ-ಯೆನಿಸುವುದು. ಲೋಕಕಾರುಣ್ಯ ಪ್ರಧಾನವಾದ ಈ "ಶರೀರ-ಶರೀರಿ-ಭಾವನೆ" ಇದ್ದರೆ ಭಕ್ತನೂ ದಾಸನೂ ಆಲೋಚಿಸಿ ಯೋಗಕ್ಷೇಮ ವಾಹಕನಾಗಿರಬೇಕಾಗುವುದು. "ಅಡಿಯೇನ್" ಎಂಬ ಶ್ರೀ ವೈಷ್ಣವರ ವಿಶಿಷ್ಟ ಶಬ್ದ ಪ್ರಯೋಗವು ಇಂತಹ ಪರಮಾತ್ಮವಶ್ಯತೆ ಶಾಸ್ತ್ರವಶ್ಯತೆಗಳ ಈ ಅರ್ಥ-ದಲ್ಲೇ ನಡೆದಿರುವುದು. ಅಹಿಂಸಾ ತತ್ತ್ವದ ಆಸರೆಯಲ್ಲಿ ವೈದಿಕ ಲೌಕಿಕ ಸಮಸ್ತ ಕರ್ಮಗಳನ್ನೂ ಎಸಗುವ ರೀತಿ ನೀತಿಗಳನ್ನು ಶ್ರೀ ಕೃಷ್ಣ ಪರಮಾತ್ಮನ ಭಗವದ್ಗೀತೆಯಿಂದ ಎಲ್ಲರೂ ಅರಿಯಬಹು ದಾಗಿದೆ. ಯಾವುದೇ ಮರಗಿಡಗಳಿಗೂ ಪಶುಪ್ರಾಣಿಗಳಿಗೂ ಬಾಧಕವಾದ ಹಿಂಸೆ ಆಗಕೂಡದೆಂದೂ ಯಜ್ಞಾದಿ ಸತ್ಕಾರ್ಯಗಳು ಲೋಕಕಾರುಣ್ಯ ಪ್ರೇರಿತವಾಗಿ ಲೋಕ ಕ್ಷೇಮಾರ್ಥವಾಗಿ ನಡಯಲೇ-ಬೇಕೆಂದೂ ಯಜುರ್ವೇದದ "ಇಷೇತ್ವಾ—ಊರ್ಜೇತ್ವಾ" ಇತ್ಯಾದಿ ಆರಂಭದ ಮಂತ್ರಗಳೇ ಘೋಷಿಸುತ್ತವೆ. ಇಂತಹ ವೇದ-ಶಾಸ್ತ್ರ-ಪುರಾಣ-ಇತಿಹಾಸ-ಆಗಮಾದಿಗಳ ಸಾರತತ್ತ್ವದ ಅನುಭವ ಚಿಂತನ ಮತ್ತು ಪ್ರಯೋಗದ ಧಾರೆ ಶ್ರೀ ವೈಷ್ಣವ ಸಿದ್ಧಾಂತದಲ್ಲಿ ಪ್ರವಹಿಸಿರುವುದು. ಇದು ರಾಮಾನುಜರ ಉಭಯ ಮೀಮಾಂಸಾ ಸಮನ್ವಿತ ಶ್ರೀ ಸೂಕ್ತಿಗಳ ಭಾವ. "ಶೇಷಃ ಪರಾರ್ಥತ್ವಾತ್" ಎಂಬ ಪೂರ್ವ ಮೀಮಾಂಸಾ ಸೂತ್ರವೇ ಈ ದೃಢಾಭಿಪ್ರಾಯಗಳಿಗೆ ಮೂಲ ಕಾರಣ ಎಂಬುದು ಗಮನಾರ್ಹ.

## ಜ್ಞಾನಸಂಪಾಕಗಳು

ಈ ಧಾರೆಯಲ್ಲಿ ಅನ್ವಯಿಸಿದವರಿಗೆ ಕೆಲವು ಅನುಭವಗಳು ಕೆಲವು ಅನುಕ್ಷಣಗಳಲ್ಲಿ ಏರ್ಪಡುವವುವು. ಪರಮಾತ್ಮನು 'ಶರೀರಿ' ಎಂದರೆ ಶರೀರವನ್ನು ಬಿಟ್ಟು ಇರುವವನಲ್ಲ. 'ಶರೀರ' ಎಂದರೆ ಒಳಗಿನ ಯಾವುದೋ ಒಂದು ಆತ್ಮಕ್ಕೆ ವಶವಾಗಿರುವುದು. ಹೀಗೆ ವಶವಲ್ಲದುದನ್ನು 'ಶರೀರ' ಎಂದು ಶಾಸ್ತ್ರೀ-ಯವಾಗಿ ಹೆಸರಿಸಲು ಆಗುವುದಿಲ್ಲ. ಈ ಮೇಲೆ ಹೇಳಿದ 'ಜಗತ್-ಬ್ರಹ್ಮ'ಗಳ ಸಂಬಂಧ, ಶಾಸ್ತ್ರೀಯ ವಾದ 'ಶರೀರ-ಶರೀರ ಭಾವ' ಎಂಬುದನ್ನು ಪರಮಾತ್ಮನ ಭಕ್ತಿಯಿಂದ ಗುರೂಪದೇಶದಿಂದ ಅರಿತು ನಡೆಯಬೇಕು. ಶರೀರ ಶರೀರಿಗಳಿಗೆ ಎಂದಿಗೂ ಹಿರಿದು ಬೇರೆಯಾಗಿರುವ "ಪೃಥಕ್ ಸ್ಥಿತಿ"ಯ ಸಂದರ್ಭ ಇಲ್ಲ. ಇದನ್ನೇ "ಅ-ಪೃಥಕ್ ಸ್ಥಿತಿ" ಎಂದು ತಿಳಿಸಿ ಈ ಸಂಬಂಧವನ್ನು "ಅಪೃಥಕ್-ಸಿದ್ಧ" ಸಂಬಂಧ ಹೆಸರಿಸಿರುವರು.

ಎರಡು ವಸ್ತುಗಳು ಒಂದಾಗಿ ಸೇರಿದ್ದರೆ ಆನುಬಂಧವನ್ನು ಸಂಯೋಗ ಎನ್ನುತ್ತಾರೆ. ಸಂಯೋಗ ಗಳಲ್ಲಿ 'ನಿಬಿಡ-ನಿಬಿಡತರ-ನಿಬಿಡತಮ' ಎಂದರೆ ಒತ್ತಡ, ಹೆಚ್ಚು ಒತ್ತಡ, ಅತಿ ಹೆಚ್ಚು ಒತ್ತಡ, ಎಂಬ ಸೂಕ್ಷ್ಮ ವ್ಯತ್ಯಾಸಗಳಿರುತ್ತವೆ. ಇಂತಹ ಪರಮಾತ್ಮ ಸಂಯೋಗಗಳು ಭಕ್ತರಿಗೆ ಆಗಾಗ ಅನುಭವಕ್ಕೆ ಬರುವುವು. ಈ ಮೂರು ವಿಧ ಸಂಯೋಗಗಳ ಅಂತರದಲ್ಲಿ ಅನೇಕ ಸೂಕ್ಷ್ಮ ಸಂಯೋಗಗಳೂ ಸಂಗೀತದ ಸ ರಿ ಗ ಮ ಪ ಧ ನಿ ಗಳ ಮಧ್ಯ ಅನೇಕ ಅಂತರ ಸ್ವರಗಳಿರುವಂತೆ ಇರಬಹುದು. ಇಂತಹ ಸಂಯೋಗಗಳು ಏರ್ಪಟ್ಟಾಗ ಜೀವಾತ್ಮನಿಗೆ ಪರಮಾತ್ಮನ ಬಗೆಗಿನ ಜ್ಞಾನವು ಪರಿಪಕ್ವತೆಗೆ ತಿರುಗಿ ಒಂದು ವಿಧವಾದ ರಸಾನುಭಕ್ಕೆ ಕಾರಣವಾಗುವುದು. ಈ ಸ್ಥಿತಿಗಳೆಲ್ಲವನ್ನೂ ಒಟ್ಟಿಗೆ "ಭಕ್ತಿ" ಎಂಬ ಒಂದೇ ಹೆಸರಿನಿಂದ ನಮೂದಿಸಲಾಗಿದ್ದರೂ ಸಹ, ವೇದಾಂತ ಶಾಸ್ತ್ರಾನುಭವಗಳ ಅಂತರಂಗ ಪ್ರವೇಶ ಮಾಡಿದವರಿಗೆ "ಪರಭಕ್ತಿ-ಪರಜ್ಞಾನ-ಪರಮಭಕ್ತಿ" ಎಂಬ ಮೂರು ಸ್ತರಗಳು ಗೋಚರ ವಾಗುತ್ತವೆ. ಇವುಗಳಲ್ಲಿ ಸಾಧಾರಣವಾಗಿ— ಪರಮಾತ್ಮ ಸಂಯೋಗಾನುಭವವಾದಾಗ ಪರಭಕ್ತಿ

ಸ್ಥಿತಿಯೂ ಮತ್ತಷ್ಟು ಆದಾಗ ಪರಜ್ಞಾನ ಸ್ಥಿತಿಯೂ ಅತಿ ಹೆಚ್ಚು ಆದಾಗ ಪರಮ ಭಕ್ತಿ ಸ್ಥಿತಿಯೂ ಆ ಜೀವಾತ್ಮನ ಸಾಮಾನ್ಯ ಭಕ್ತಿರೂಪವಾದ ಜ್ಞಾನಕ್ಕೆ ಉಂಟಾಗುವುದು. ಈ ಪರಮ ಭಕ್ತಿ ಸ್ಥಿತಿಯೇ 'ಮೋಕ್ಷ'ಕ್ಕೆ ಪೂರ್ವಕ್ಷಣ ವೃತ್ತಿಯಾದ ಕಾರಣ ಎಂಬುದೂ ಸಕಲ ವೇದಾಂತ ಸಾರ.

## ಜೀವಾತ್ಮ ಪರಮಾತ್ಮರುಗಳ ಅವಿಭಾಗ

ಇಂತಹ 'ಸಂಯೋಗ' ವನ್ನು 'ಅವಿಭಾಗ' ಎಂಬ ಶಬ್ದದಿಂದ ಪೂರ್ವ ಮತ್ತು ಉತ್ತರ ಮೀಮಾಂಸೆಯ ಸೂತ್ರಗಳಲ್ಲಿ ಬಳಸಲಾಗಿದೆ. ಭಿನ್ನ ವಿಷಯಗಳಲ್ಲಿ ಪ್ರಯುಕ್ತವಾಗಿದ್ದರೂ ಸಹ ಒಟ್ಟಿನಲ್ಲಿ "ಅವಿಭಾಗ" ಎಂದರೆ "ಸಂಯೋಗ ವಿಶೇಷ" ಎಂಬ ಅರ್ಥವೇ ಹೊರತು ಕೇವಲ ಐಕ್ಯ–ಏಕತೆ ಏಕ-ವಸ್ತುತ್ವ–ಅನ್ಯ ಪದಾರ್ಥಾಭಾವ–ಎಂಬ ಅರ್ಥ ಅಲ್ಲ. ಹೀಗೆ ಅನೇಕ ವಸ್ತುಗಳ ವಿಶಿಷ್ಟ ರೂಪವಾದ ಈ ಏಕತೆಯೇ "ವಿಶಿಷ್ಟಾದ್ವೈತ" ಎನಿಸಿದೆ. ಜೀವಾತ್ಮ ಪರಮಾತ್ಮರುಗಳಿಗೆ ವಿಶಿಷ್ಟಾದ್ವೈತವೇ ಹೊರತು ಕೇವಲಾದ್ವೈತವಲ್ಲ. ವೇದೋಪಾಂಗವಾದ "ಮೀಮಾಂಸಾಶಾಸ್ತ್ರ"ದ ಪೂರ್ವ ಉತ್ತರ ಭಾಗಗಳು ಹೀಗೆ ಸಮಾನಾರ್ಥಕದ ಪ್ರಯೋಗದಿಂದ ತತ್ವ ನಿರ್ಣಯಕ್ಕೆ ಪರಸ್ಪರ ಪೂರಕ ಸಹಾಯಕಗಳಾಗಿವೆ.

## ಪದ–ಪ್ರಮಾಣ ಶಾಸ್ತ್ರಗಳ ಸಹಾಯ

ಪ್ರಸಂಗಾತ್ 'ವಾಕ್ಯ ಶಾಸ್ತ್ರ'ವೆನಿಸಿದ ಮೀಮಾಂಸೆಯಂತೆ "ಪದಶಾಸ್ತ್ರ"ವೆನಿಸಿದ ವೇದಾಂಗವಾದ ವ್ಯಾಕರಣದಲ್ಲೂ ಈ ತತ್ವವು ಸೂಚಿತವೆಂಬುದನ್ನು ನಾವು ಗಮನಿಸಬೇಕು. ವ್ಯಾಕರಣ ಮುನಿತ್ರಯ ಪ್ರಧಾನರಾದ ಪಾಣಿನಿ ಮಹರ್ಷಿಯು "ವಾಸುದೇವಾರ್ಜುನಾಭ್ಯಾಂ" ಎಂದು ದ್ವಂದ್ವ ಸಮಾಸ ಮಾಡಿ ಜೀವಾತ್ಮನಾದ ಅರ್ಜುನನಿಗೂ ಪರಮಾತ್ಮನಾದ ವಾಸುದೇವನಿಗೂ ತಾರತಮ್ಯವಿರುವುದರಿಂದ ಇವರಿಬ್ಬರನ್ನೂ ಜೋಡಿಸಿ ಹೇಳುವಾಗ ಪುರುಷೋತ್ತಮತ್ವದಿಂದ ಏಕೈಕ ಉತ್ಕೃಷ್ಟನಾದ ಪರಮಾತ್ಮ ವಾಸುದೇವನಿಗೆ ಮೊದಲ ಸ್ಥಾನವೂ, ಅಪ್ರಧಾನನಾಗಿ, ಪರಮಾತ್ಮನಿಗೆ ಪರತಂತ್ರನಾದ ಜೀವಾತ್ಮ ಎನಿಸುವ ಅರ್ಜುನನಿಗೆ ಎರಡನೆಯ ಸ್ಥಾನವೂ ವ್ಯವಸ್ಥಿತವಾಗಿದೆಯೆಂದು ಸ್ಪಷ್ಟಪಡಿಸಿರುವರು.

ಪ್ರಮಾಣಶಾಸ್ತ್ರವೆಂದು ಪ್ರಸಿದ್ಧವಾದುದು ತರ್ಕಶಾಸ್ತ್ರ. ಇದೂ ಮೀಮಾಂಸೆಯಂತೆ ವೇದಕ್ಕೆ ಒಂದು ಉಪಾಂಗವೆನಿಸಿ "ನ್ಯಾಯ ವಿಸ್ತರ" ಎಂಬ ಶಬ್ದದಿಂದ ಗೃಹೀತವಾಗಿದೆ. ತರ್ಕಮತವು ಎಂದಿಗೂ ಕೇವಲಾದ್ವೈತವಲ್ಲ. ಹೀಗೆ ಪದ–ವಾಕ್ಯ–ಪ್ರಮಾಣ ಶಾಸ್ತ್ರ ಪ್ರಸಿದ್ಧವಾದ ವಿಭಿನ್ನ ಸಂಬಂಧಿ ಪದಾರ್ಥಗಳ ಸಂಬಂಧ "ಅವಿಭಾಗ" ಎಂದರೆ ವಿಶಿಷ್ಟ ರೀತಿಯ ಏಕತೆ ಎಂಬುದು ವೇದ ವೇದಾಂತಗಳ ಸಮನ್ವಯ ದೃಷ್ಟಿಗೆ ಮುಖ್ಯ ಪರಿಪೋಷಕವಾಗಿದೆ.

## ವೇದಾಂತ ರಹಸ್ಯ–ಸಮನ್ವಯ ದೃಷ್ಟಿ

ಪರಮಾತ್ಮನು ಆದಿಯಿಂದಲೂ ಜೀವಾತ್ಮಗಳಿಗೆ ಮಾತಾಪಿತಾ ಭ್ರಾತಾ ನಿವಾಸಃ ಶರಣಂ ಸುಹೃತ್ ಗತಿಃ ನಾರಾಯಣಃ ಎಂಬ ಉಪನಿಷತ್ ವಚನದಂತೆ ಸಕಲ ವಿಧ ಬಂಧುವಾಗಿ ಆಚಾರ್ಯನಾಗಿ ಅಭಿಮಾನವಿಟ್ಟು ಫಲ ಪರ್ಯಂತವಾಗಿ ಅವರನ್ನು ನಡೆಸಿಕೊಳ್ಳುತ್ತಾನೆ ಎಂಬುದೇ ಸಮಸ್ತ ವೇದ ಸಾಹಿತ್ಯದ ಸಾರಾರ್ಥ. ಚತುರ್ವೇದಾರಂಭದ "ಅಗ್ನಿಮೀಳೇ ಪುರೋಹಿತಂ" ಎಂಬುದರಲ್ಲಿಯೇ ಈ ಅರ್ಥ ಸ್ಪಷ್ಟವಾಗಿದೆ. "ಅಗ್ನೇ ನಯ ಸುಪಥಾ" ಎಂಬ ಶುಕ್ಲ ಯಜುರ್ವೇದದ ಕೊನೆಯ ಮಂತ್ರ ಪರಮಾತ್ಮನ ಸಂಬಂಧ ಕೃತವಾದ ಸತತ ಪ್ರಯತ್ನವನ್ನೂ ಫಲಪರ್ಯಂತ ನಯನವನ್ನೂ ತಿಳಿಸಿ ಪ್ರಾರ್ಥನೆ ಮಾಡಿ ತೋರಿಸುತ್ತದೆ.

ಹೀಗೆ ಸಾಂಗೋಪಾಂಗವಾಗಿ ಪರಮ ಪುರುಷಾರ್ಥವಾದ ಮೋಕ್ಷದ ಬಗ್ಗೆ ತಿಳುವಳಿಕೆಯನ್ನು ಸ್ಪಷ್ಟವಾಗಿ ಪ್ರತಿಪಾದಿಸುವ ಅನೇಕ ಮಂತ್ರಗಳನ್ನೂ ಅವುಗಳ ಉಪಬೃಂಹಣವಾದ ಸ್ಮೃತಿ–ಇತಿಹಾಸ ಪುರಾಣ ವಚನಗಳನ್ನೂ ಗಮನಿಸಿದರೆ ಮಾತ್ರ "ಉಭಯ ಮೀಮಾಂಸಾ" ಸಮನ್ವಯ ದೃಷ್ಟಿಯು ತಾನೇ ತಾನಾಗಿ ತಿಳಿಯಾಗುವುದು.

### ತ್ಯಾಗ ಯೋಗಗಳ ಸಮನ್ವಯ

ಬಾಹ್ಯ ಕರ್ಮಗಳ ಆಡಂಬರ ಅಬ್ಬರಗಳನ್ನು ತ್ಯಜಿಸಿದರೂ ಸೂಕ್ಷ್ಮ ಅಂತರಂಗ ಕರ್ಮಗಳು ಎಂದಿಗೂ ನಮ್ಮನ್ನು ಬಿಟ್ಟಿರುವುದಿಲ್ಲ. ಗೀತೆಯಲ್ಲಿ ಶ್ರೀ ಕೃಷ್ಣ ಪರಮಾತ್ಮನು ಸಮಸ್ತ ಕರ್ಮಗಳನ್ನು ತ್ಯಾಗಮಾಡುವ ಒಂದು ವಿಧಾನವನ್ನೂ, ವಶದಲ್ಲಿಟ್ಟುಕೊಳ್ಳುವ ಒಂದು ವಿಧಾನವನ್ನೂ ಅನಾದಿ ಸಂಪ್ರದಾಯ ಪರಂಪರೆಯಿಂದ ಬಂದವುಗಳೆಂದು ಶ್ಲಾಘಿಸಿ, ಕೊನೆಗೆ ಅವುಗಳಲ್ಲಿ ಅಂತರಂಗ ಭೇದ–ವಿಲ್ಲವೆಂದೂ, ಆದರೂ ತ್ಯಾಗಮಾರ್ಗಕ್ಕಿಂತ ವಶದಲ್ಲಿಟ್ಟುಕೊಳ್ಳುವ ಯೋಗಮಾರ್ಗ ಒಳಿತೆಂದೂ ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸಿರುವನು. ಈಶಾವಾಸ್ಯ ಮಂತ್ರ ದ್ರಷ್ಟಾರಾದ ಯಾಜ್ಞವಲ್ಕ್ಯರೂ ಅಪರ ಶಿಷ್ಯ ಪರಂಪರೆಯಲ್ಲಿ ಮುಖ್ಯರಾದ ಜನಕಾದಿ ರಾಜರ್ಷಿಗಳ ಮಾರ್ಗವು ಇದೇ ಆಗಿದೆ. ಸನಕ–ಸನಂದನಾದಿ ಮಹರ್ಷಿಗಳ ತ್ಯಾಗ ಮಾರ್ಗವು ಎಲ್ಲರಿಗೂ ಅನುಸರಿಸಲು ಸಾಧ್ಯವಿಲ್ಲದುದು. ಅವರಂತಹ ಅವಧೂತರ ಬಾಹ್ಯಾಚರಣೆಗಳನ್ನೂ ಅನುಕರಣ ಮಾಡಿದ ಮಾತ್ರಕ್ಕೆ ಸಿದ್ಧಿ ದೊರೆಯದು. ಅವರ ಅಂತರಂಗವನ್ನೂ, ಅಂತರಂಗದ ಕರ್ಮಯೋಗದ ಬಗ್ಗೆಯನ್ನೂ ತಿಳಿಯುವುದು ಮತ್ತೂ ದುಸ್ತರ. ಆದುದರಿಂದ ಕರ್ಮ–ಬ್ರಹ್ಮ ಭಾಗಗಳ ಸಮನ್ವಿತವಾದ ನಿರಪಾಯ ಯೋಗಮಾರ್ಗವನ್ನೇ ಅನುಸರಿಸು ವುದು ಭಗವದ್ಗೀತೆಯ ಪ್ರಧಾನೋಪದೇಶ.

ಭಗವದ್ರಾಮಾನುಜರು ಈ ಉಭಯ ಮೀಮಾಂಸಾ ಸಮನ್ವಯ ದೃಷ್ಟಿಯನ್ನು ಬಲರಾಮಾನುಜ ನಾದ ಶ್ರೀಕೃಷ್ಣನು ತೋರಿಸಿದಂತೆ ಅನುಸರಿಸಿ ಬಲರಾಮನಂತೆ ಭಕ್ತಿಯೆಂಬ ನೇಗಿಲನ್ನು ಎತ್ತಿ ಹಿಡಿದು ಸ್ಥೂಲವಾದ ತ್ಯಾಗಮಾರ್ಗವಾದಿಗಳ ಆಡಂಬರ ಅವಿಚಾರಗಳನ್ನು ಮಾತ್ರ ಖಂಡಿಸಿದ್ದಾರಲ್ಲದೆ, ದ್ವೈತ–ಅದ್ವೈತಾದಿ ಸಮಸ್ತ ಮಾರ್ಗಗಳಲ್ಲೂ ಸಮನ್ವಯ ದೃಷ್ಟಿಯನ್ನು ತೋರಿಸಿಕೊಟ್ಟು ಉಪಕರಿಸಿ ರುವರು. ತ್ಯಾಗ ಯೋಗಗಳ ಸಮನ್ವಯವೇ ಉಭಯ ಮೀಮಾಂಸಾ ಸಾರ ಸರ್ವಸ್ವ.

### ಕರ್ಮ ಬ್ರಹ್ಮ ಮೀಮಾಂಸೆಯ ಐತಿಹಾಸಿಕ ದುರಂತ ನಿವಾರಣೆ

ಶ್ರೀ ಶಂಕರ ಭಗವತ್ಪಾದರ ಸಮಯಕ್ಕೆ ಹಿಂದೆಯೇ ಕರ್ಮಬ್ರಹ್ಮಮೀಮಾಂಸೆಗಳು ಬೌದ್ಧರ ಉಪಟಳದಿಂದ ಭಿನ್ನ–ಭಿನ್ನವಾಗಿ, ದ್ವೈತರಾಹುವಿನಂತೆ ಬೆಳೆದಿದ್ದ ತಮ್ಮದೇ ರುಂಡ–ಮುಂಡಗಳನ್ನು ಕತ್ತರಿಸಿಕೊಂಡು 'ರಾಹುಮೀಮಾಂಸೆ' 'ಕೇತು ಮೀಮಾಂಸೆ' ಎನಿಸಿಕೊಂಡಿದ್ದವು. ಇದೊಂದು ಮಧ್ಯಕಾಲಿಕ ದುರಂತ.

ಇದನ್ನೂ ಆಚಾರ್ಯ ಶಂಕರರ ಸಮಕಾಲಿಕರೂ ಮಿತ್ರರೂ ಶುದ್ಧಮೀಮಾಂಸಕರೂ ಆದ 'ಭಟ್ಟ ಕುಮಾರಿಲ'ರು ತಮ್ಮ ಗ್ರಂಥದಲ್ಲಿ ತಿಳಿಸಿ ಇದರ ಪರಿಹಾರ ಮಾರ್ಗವು 'ಆಸ್ತಿಕತೆ' ಒಂದೇ ಎಂದಿದ್ದಾರೆ.

ಪ್ರಾಯೇಣೈವ ಹಿ ಮೀಮಾಂಸಾ ಲೋಕೇ ಲೋಕಾಯತೀಕೃತಾ ।
ತಾಂ ಆಸ್ತಿಕಪಥೇ ನೇತುಂ (ಅಯಂ ಯತ್ನಃ ಕರಿಷ್ಯತೇ) ॥

"ವ್ಯವಹಾರೇ ಭಟ್ಟನಯಃ" ಎಂದು ಆಚಾರ್ಯ ಶಂಕರ ಭಗವತ್ಪಾದರು ತಿಳಿಸಿ ಇವರನ್ನೇ ಅನುಸರಿಸಿರುವರು. ರಾಮಾನುಜರೂ ಅಷ್ಟೇ.

"ನಾಸದೀಯ ಸೂಕ್ತ", "ವಿಶ್ವಕರ್ಮ ಸೂಕ್ತ", "ಪುರುಷ ಸೂಕ್ತ", ಮುಂತಾದ ಸೂಕ್ತಗಳನ್ನು ಕಡೆಗಣಿಸಿ ಕರ್ಮ ಮೀಮಾಂಸಕರು ಪರಮಾತ್ಮನೇ ಇಲ್ಲವೆಂದು ನಾಸ್ತಿಕವಾದ ಹೂಡುವಷ್ಟು ಕೆಳಮಟ್ಟಕ್ಕೆ ಇಳಿದಿದ್ದರೆಂಬುದು ಸತ್ಯ ಸಂಗತಿ. ಆಚಾರ್ಯ ಶಂಕರ ಭಗವತ್ಪಾದರು "ಕರ್ಮ ದಕ್ಷಿಣ ಧ್ರುವವಾದರೆ ಬ್ರಹ್ಮ ಉತ್ತರ ಧ್ರುವ" ಎಂಬ ರೀತಿಯಲ್ಲಿ ಕರ್ಮಾತಿರಿಕ್ತ ವಿಷಯವನ್ನೇ ಪ್ರಧಾನವಾಗಿ ಪ್ರಕಾಶಪಡಿಸಲು ಹೊರಡಬೇಕಾಯಿತು. ಬೌದ್ಧರ ನೈರಾತ್ಮ್ಯವಾದವು ವೈದಿಕರಲ್ಲಿ ಒಳಹೊಕ್ಕಿದುದೇ ಈ ದುರಂತಕ್ಕೆ ಕಾರಣ. ಪರಮಾತ್ಮಾ ಇಲ್ಲವೆಂದರೆ ಸಾಲದು. ಜೀವಾತ್ಮವೂ ಸಹ ಇಲ್ಲ ಎಂಬ ಮಟ್ಟಕ್ಕೆ ಇಳಿದಿತ್ತು ಈ ವಾದ. ಇದನ್ನು ಪರಿಹರಿಸಿದ ಆ ಸಮಯದ ಆಚಾರ್ಯರು ಮೂವರು. ಕರ್ಮಠರಾದ ಕುಮಾರಿಲ ಭಟ್ಟರು, ಬ್ರಹ್ಮವಾದಿಗಳಾದ ಶಂಕರ ಭಗವತ್ಪಾದರು, ಜಿನಯೋಗೀಂದ್ರರಾದ ಅಕಳಂಕ ಭಟ್ಟ ದೇವರು.

ಹೀಗೆ ಕರ್ಮ-ಬ್ರಹ್ಮಾತ್ಮಕವಾದ 'ಉಭಯ ಮೀಮಾಂಸಾ' ಸಮನ್ವಯವು, "ಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ" ಮುಂತಾದ ವೇದ ವಚನಗಳನ್ನೇ ಅನುಸರಿಸಿ ಬಂದಿದೆ. ಶ್ರೀ ವೈಷ್ಣವ ಪೂರ್ವಾಚಾರ್ಯರೆಲ್ಲರ ಅನುಷ್ಠಾನ ವಿಶೇಷಗಳಲ್ಲಿ ಸೂಕ್ಷ್ಮಾತಿ ಸೂಕ್ಷ್ಮ ಕರ್ಮವಿಶೇಷಗಳೆಲ್ಲವೂ ಅಡಗಿವೆ, ಎಂಬುದನ್ನೂ ಅದುದರಿಂದ ಅವರ ಜ್ಞಾನ ಭಕ್ತಿ ವೈರಾಗ್ಯಗಳು ಅಸಾಮಾನ್ಯವಾಗಿ ಬೆಳಗಿ ಲೋಕೋಪಕಾರಗಳಾದುವೆಂದೂ ನಾವು ತಿಳಿಯಬಹುದು.

### ಆಚಾರ್ಯ ಕಟಾಕ್ಷದಿಂದ ಸರ್ವಲಾಭ

ಶ್ರೀ ರಾಮಾನುಜಾರ್ಯರ ಶಿಷ್ಯ ಪ್ರಶಿಷ್ಯ ಪರಂಪರೆಯಲ್ಲಿ ಅಧಿಕರಿಸಿ "ಉಭಯ ಮೀಮಾಂಸಾ ಸಮನ್ವಯ ದೃಷ್ಟಿ" ಏನೆಂಬುದನ್ನು ಅರಿಯಬಹುದು. ಸಮಸ್ತ ವೇದ ವಾಙ್ಮಯವೂ ಏಕಾರ್ಥದಲ್ಲಿ ಸಂಘಟಿತವಾಗಿದೆಯೆಂಬುದನ್ನು ವಿಮರ್ಶಿಸಬಹುದು. ಆಚಾರ್ಯಾನುಗ್ರಹದಿಂದ ಲಭಿಸುವ ಸಾಂಗೋಪಾಂಗವಾದ ಸರಹಸ್ಯವಾದ ವೇದವಾಙ್ಮಯದ ಸಾರತಮ ಸೂಕ್ಷ್ಮ ಜ್ಞಾನವಷ್ಟೇ ಈ ವೈದಿಕ ವಾಙ್ಮಯದ ರತ್ನ ಭಂಡಾರದ ಮಾರ್ಗದರ್ಶಿನಿ ಮತ್ತು ವೇದಾಭರಣ ಸಂಪುಟದ ಕೀಲಿಕೈ.

### ನಿಗಮನ

ಪಲ್ಲವಗ್ರಾಹಿಮೀಮಾಂಸಾ ಪಾಂಡಿತ್ಯಸ್ಯಾಪಿ ನಿರ್ಭಯಂ ।
ಕಥಾನುಕಥಿತಂ ಯತ್‌ತತ್ ಕ್ಷಂತುಮರ್ಹಂತಿ ಸಜ್ಜನಾಃ ॥

ಇತಿ

ವಿದ್ವಾನ್ ಅಯ್ಯಂಗಾರ್ ಶ್ರೀ ರಾಮಶರ್ಮಾ
ರಾಮಾನುಜದಾಸಃ, ವೇದಾಂತ,
ಮೀಮಾಂಸಾ ಪ್ರಾಧ್ಯಾಪಕರು,
ಸಂಸ್ಕೃತ ಮಹಾಪಾಠಶಾಲೆ, ಮೇಲುಕೋಟೆ

# ವೇದಗಳು ಅಪೌರುಷೇಯ

ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಂ ಮಹೇಶ್ವರಮ್ ॥

'ಮಂತ್ರ ಬ್ರಾಹ್ಮಣಯೋರ್ವೇದ ನಾಮಧೇಯಂ' ಎಂಬ ಹೇಳಿಕೆಯಂತೆ 'ಮಂತ್ರ' ಮತ್ತು 'ಬ್ರಾಹ್ಮಣ' ಗ್ರಂಥಗಳಿಗೇ ವೇದ ಎಂಬ ಹೆಸರು. ವೇದವು ಪುಸ್ತಕ ಸ್ವರೂಪದಲ್ಲಿರುವಂತಹದು ಎಂಬುದು ಸಾಮಾನ್ಯರ ಅನಿಸಿಕೆಯಾಗಿರುತ್ತದೆ. ಆದರೆ ಅದರ ಸ್ವರೂಪ ಪುಸ್ತಕವಲ್ಲ. ಸಂಪ್ರದಾಯ ಗುರುಗಳ ಮುಖದಿಂದ ಹೊರಹೊಮ್ಮಿ ಪರಂಪರಾಗತವಾಗಿ ಶಿಷ್ಯರ ಕಿವಿಯನ್ನು ತಲುಪಿದ ಶಬ್ದ ಸಮೂಹವೇ ವೇದವೆಂದು ಹೇಳಬಹುದು. ಗುರುಗಳು ಪರಂಪರೆಯಿಂದ ಯಾವುದನ್ನು ಕಲಿತಿರುವರೋ ಅದನ್ನೇ ನಾವು ಅದೇ ಅವಿಚ್ಛಿನ್ನ ಪರಂಪರೆಯಿಂದ ಸಂಪಾದಿಸುವದು ನಮ್ಮ ಆದ್ಯಕರ್ತವ್ಯ ಎಂಬ ಉದಾತ್ತ ಮನೋಭಾವನೆಯಿಂದ ಉಪನಯನಾನಂತರದಲ್ಲಿ ಗುರುಕುಲವಾಸಿಯಾದ ಶಿಷ್ಯರು ವಿನಯಾತಿಶಯದಿಂದ, ವಿಧೇಯತೆಯಿಂದ ಆ ವಿದ್ಯೆಯನ್ನು ಸಂಗ್ರಹಿಸಲು ಪರಿಶ್ರಮಿಸುವರೋ ಆಗ ಗುರುಗಳ ಕಂಠಗತವಾಗಿದ್ದ ವೇದ ವಿದ್ಯೆಯು ಶಿಷ್ಯರಿಗೆ ಲಭಿಸಿತು. ಹೀಗೆ ವೇದವಿದ್ಯೆಯ ಪರಂಪರೆಯು ಅಕುಂಠಿತವಾಗಿ ನಡೆಯಿತು. ಆದರೆ, ಕಾಲಗತಿಗನುಸರಿಸಿ ಶಿಷ್ಯರ ಧಾರಣಾ ಶಕ್ತಿಯು ಕ್ರಮೇಣ ಕಡಿಮೆಯಾಗುತ್ತಿರುವುದು ಕಂಡು ಬಂದಾಗ ವೇದ ಮಂತ್ರಗಳ ಜೋಡಣೆಯ ಕ್ರಮದಲ್ಲಿ ಅಥವಾ ಮಂತ್ರಗಳ ಆನುಪೂರ್ವಿಯಲ್ಲಿ ಸಂಶಯ ಉಳಿಯಬಾರದೆಂಬ ಧೋರಣೆಯಿಂದ ವೇದಾಕ್ಷರಗಳ ಲೇಖನ ಶೈಲಿಯು ಕಾಣಿಸಿಕೊಂಡಿತು. ಆದ್ದರಿಂದಲೇ ಮಂತ್ರಗಳ ಆನುಪೂರ್ವಿಯಲ್ಲಿ (ಈ ಮಂತ್ರವಾದ ಮೇಲೆ ಇದು ಎಂಬ ಕ್ರಮದಲ್ಲಿ) ಸಂಶಯ ಮೂಡಿ ಬಂದಾಗ ಪರಂಪರಾಗತವಾದ ಈ ಲಿಖಿತ ಪಾಠವು ಸ್ಮರಣೆಗೆ ಸಹಾಯಕವಾಗಿ ನಿಂತಿತು. ಆದ್ದರಿಂದ ಪರಂಪರಾಗತವಾದ ಶಬ್ದರಾಶಿಯೇ 'ವೇದ' ಹೊರತು, ಲಿಖಿತ ಪುಸ್ತಕ ವೇದದ ನಿಜಸ್ವರೂಪವಲ್ಲವೆಂಬುದು ಗಮನಾರ್ಹವಾಗಿದೆ.

ಸನಾತನ ಸಂಪ್ರದಾಯದಿಂದ ಬಂದ ವಿಶಿಷ್ಟ ಸ್ವರೂಪದ ಶಬ್ದರಾಶಿಯೇ ವೇದವೆಂದು ತಿಳಿದು ಬಂದಾಗ ಶಬ್ದೋತ್ಪತ್ತಿಯ ಪ್ರಕ್ರಿಯದ ಬಗ್ಗೆ ಜಿಜ್ಞಾಸೆ ಉಂಟಾಗುವದು ಸಹಜವಾಗಿದೆ. ಪಾಣಿನೀಯ 'ಶಿಕ್ಷಾ'[1] ದಲ್ಲಿ ಈ ವಿಷಯವಾಗಿ ವೈಜ್ಞಾನಿಕವಾದ ನಿರೂಪಣೆ[2] ಹೀಗಿದೆ.

ಏನನ್ನಾದರೂ ಹೇಳ ಬಯಸಿದಾಗ ಮೊದಲು ಆತ್ಮವು ಬುದ್ಧಿಯೊಂದಿಗೆ ಸರಿಯಾಗಿ ವಿಚಾರಿಸಿ ವಿಷಯವನ್ನು ನಿಶ್ಚಯಿಸಿಕೊಳ್ಳುತ್ತದೆ. ಆಮೇಲೆ ಅದನ್ನು ಇನ್ನೊಬ್ಬರಿಗೆ ತಿಳಿಸ ಬಯಸಿ ಮನಸ್ಸನ್ನು ಪ್ರೇರಿಸುತ್ತದೆ. ಆತ್ಮನಿಂದ ಪ್ರೇರಿತನಾದ ಮನಸ್ಸು ಶರೀರದಲ್ಲಿರುವ ಅಗ್ನಿಯನ್ನು ಉತ್ತೇಜಿತಗೊಳಿಸುತ್ತದೆ. ನಂತರ ಆತ್ಮ ಮತ್ತು ಮನಸ್ಸುಗಳಿಂದ ಉತ್ತೇಜಿತವಾದ ಅಗ್ನಿಯು ಶರೀರದಲ್ಲಿ ಸಂಚರಿಸುವ

---

1) ಶಿಕ್ಷಾ, ಕಲ್ಪಸೂತ್ರ, ವ್ಯಾಕರಣ, ಛಂದಸ್ಸು, ನಿರುಕ್ತ ಮತ್ತು ಜ್ಯೋತಿಷ ಈ ಆರು ವೇದಾಂಗಗಳಲ್ಲಿ ಒಂದು.

2) ಆತ್ಮಾಬುದ್ಧ್ಯಾ ಸಮೇತ್ಯರ್ಥಾನ್ ಮನೋ ಯುಂಕ್ತೇ ವಿವಕ್ಷಯಾ ।
ಮನಃಕಾಯಾಗ್ನಿಮಾಹಂತಿ ಸ ಪ್ರೇರಯತಿ ಮಾರುತಮ್ ॥
ಸೋದೀರ್ಣೋ ಮೂರ್ಧ್ನ್ಯಭಿಹತೋ ವಕ್ತ್ರಮಾಪದ್ಯ ಮಾರುತಃ ।
ವರ್ಣಾನ್ ಜನಯತೇ ತೇಷಾಂ ವಿಭಾಗಃ ಪಂಚಧಾ ಸ್ಮೃತಾ ॥-ಶಿಕ್ಷಾ

ವಾಯುವನ್ನು ಅಭೀಷ್ಟವಾದ ಸ್ವರತಂತ್ರಿಯಿಂದ ಹೊರಹೊಮ್ಮಲು ಎಬ್ಬಿಸುತ್ತದೆ. ಹೀಗೆ ಎದ್ದ ವಾಯು ಸ್ವರತಂತ್ರಿಯಲ್ಲಿ[3] ಬಡಿತ (ಆಘಾತ)ವನ್ನುಂಟು ಮಾಡುತ್ತದೆ. ಆದರಿಂದ ಶಬ್ದ ಉಂಟಾಗುತ್ತದೆ. ಕಂಠ ಮತ್ತು ತುಟಿಗಳ ನಡುವೆ ಅನೇಕ ಸ್ವರ ತಂತ್ರಿಗಳಿರುತ್ತವೆ. ಮೇಲೆ ಹೇಳಿದ ಪ್ರಕ್ರಿಯೆಯಿಂದ ಮೇಲೆದ್ದ ಗಾಳಿಯು ಯಾವ ಯಾವ ಸ್ವರ ತಂತ್ರಿಗಳನ್ನು ಬಡಿಯುತ್ತದೆಯೋ ಆಯಾ ಸ್ವರವಾಗಲಿ ವ್ಯಂಜನವಾಗಲಿ ಅಕ್ಷರವು ಉಂಟಾಗುತ್ತದೆ. ಈ ಪ್ರಕ್ರಿಯೆಯಿಂದ ಹೊರಟ ಶಬ್ದವು ಕೇಳುವವನಿಗೆ ಅದರ ಶಕ್ತಿ ಗ್ರಹಣವಿದ್ದರೆ ಅರ್ಥ ಜ್ಞಾನವನ್ನುಂಟು ಮಾಡಿಕೊಡುತ್ತದ.

ಇಷ್ಟವಾದ ಸ್ವರತಂತ್ರಿಗಳ ಸ್ಥಾನಗಳಲ್ಲಿ ಕಾಯಾಗ್ನಿಯಿಂದ ಯಾವ ಗಾಳಿಯ ಬಡಿತ ಉಂಟಾಗುತ್ತದೆಯಲ್ಲ ಅದು ಚೇತನ-ಕಾರ್ಯದಂತೆ ಅವಿಚ್ಛಿನ್ನವಾಗಿ, ಸರಿಯಾಗಿ ನಡೆಯುತ್ತಿರುತ್ತದೆ. "ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ" ಎಂಬ ಗೀತಾ ವಚನವು (ಅಧ್ಯಾಯ ೧೫) ಅದರ ಸಚೇತನತ್ವವನ್ನು ಸಮರ್ಥಿಸುತ್ತದೆ. ಹೀಗೆ ಈ ಕಾಯಾಗ್ನಿಯೇ ಶಬ್ದೋತ್ಪತ್ತಿಯ ಪ್ರಕ್ರಿಯೆಯಲ್ಲಿ ವಾಯುವಿನ ಗತಿಯ ವಿಷಯದಲ್ಲಿ ಸಹಾಯಕವಾಗುತ್ತದೆ ಎಂಬುದನ್ನು ಮರೆಯುವಂತಿಲ್ಲ. ಅಂತಹ ಈ ವಾಯುವು ಪ್ರಾಣವಾಯುವಿನ ರೂಪದಲ್ಲಿ ನಿಶ್ವಾಸದ ಮುಖಾಂತರ ಸ್ಥೂಲ ರೂಪದಿಂದ ಪ್ರಕಟವಾಗುತ್ತದೆ. ಆದ್ದರಿಂದ ಶಬ್ದೋತ್ಪತ್ತಿಯ ಪ್ರತಿಕ್ರಿಯೆಯಲ್ಲಿ ನಿಶ್ವಾಸವೂ ಸಹಾಯಕವಾಗುತ್ತದೆ ಎಂಬ ವೈಜ್ಞಾನಿಕ ತತ್ತ್ವವು ಸಿದ್ಧವಾಗುತ್ತದೆ. ಹೀಗೆ ಸ್ವರ ತಂತ್ರಿಗಳಿಗೆ ಪ್ರಾಣಿಗಳ ನಿಶ್ವಾಸದ ಬಡಿತ ಉಂಟಾದಾಗಲೇ ಶಬ್ದ ಹುಟ್ಟುವದು. ಕೇವಲ ಪ್ರಾಣಿಗಳಲ್ಲಷ್ಟೇ ಅಲ್ಲ ವೀಣಾದಿ ವಾದ್ಯಗಳಲ್ಲಿಯೂ ಬಡಿತ ಉಂಟಾದಾಗ ಯಾವ ಧ್ವನಿಯೂ ಕೇಳಿ ಬರುತ್ತದೆಯೊ ಅವನ್ನು ಏಕಾಗ್ರತೆಯಿಂದ ಕೇಳಿದಾಗ ಅಲ್ಲಿಯೂ ಶಬ್ದಗಳು ಕೇಳಿ ಬರುವುದುಂಟೆಂಬುದು ಅನೇಕ ಗಾನಯೋಗಿಗಳ ಅನುಭವವೂ ಆಗಿದೆ. ಪರಮೇಶ್ವರನ ಡಮರುವಿನ[4] ನಾದದಿಂದ 'ಅ ಇ ಉಣ್' ಮುಂತಾದ ಶಬ್ದಗಳು ಹುಟ್ಟಿದವೆಂಬುದು ಇದಕ್ಕೆ ಸಾಕ್ಷಿಯಾಗಿದೆ.

ಸ್ವಪ್ನಾವಸ್ಥೆಯಲ್ಲಿ ನಿಶ್ವಾಸ ಮತ್ತು ಸ್ವರತಂತ್ರಿಗಳು ಅಲೌಕಿಕವೇ ಆಗಿದ್ದು ಅವುಗಳ ಬಡಿತದಿಂದ ಸ್ವಪ್ನದಲ್ಲಿಯೂ ಸ್ವಾಪ್ನಿಕ ಶಬ್ದ ಕೇಳಿ ಬರುತ್ತವೆ. ತಂತ್ರಶಾಸ್ತ್ರದ ವಿವರಣೆಯಂತೆ ಮೂಲಾಧಾರವು ಚೈತನ್ಯ ಸ್ವರೂಪವಾದ ಮಾತೃಶಕ್ತಿಯ ಸ್ಥಾನವಾಗಿರುತ್ತದೆ. - ಅದು ಅವಿದ್ಯೆಯಿಂದ ಆವೃತವಾಗಿರುತ್ತದೆ. ಈ ಮಾತೃಶಕ್ತಿಯ ನಿಶ್ವಾಸದ ಬಡಿತವು ಸಂಸ್ಕಾರ ರೂಪದಲ್ಲಿರುವ ಸ್ವರತಂತ್ರಿಗಳಿಗೆ ತಾಗಿದಾಗ ಸ್ವಪ್ನಾವಸ್ಥೆಯಲ್ಲಿಯ ಶಬ್ದಗಳು ಉಂಟಾಗುತ್ತವೆ ಎಂಬುದನ್ನು ಇಲ್ಲಿ ಸ್ಮರಿಸಬಹುದು.

ಇನ್ನು ವೇದ ಶಬ್ದಗಳ ಬಗ್ಗೆ ಇದೇ ದಿಶೆಯಲ್ಲಿ ವಿಚಾರ ಮಾಡಬಹುದು. ಈ ಮಾತೃಶಕ್ತಿಯೇ ಅಥವಾ ಆತ್ಮಶಕ್ತಿಯೇ ಸೃಷ್ಟಿಯ ಸಮಯದಲ್ಲಿ ತನ್ನನ್ನು ವಿವಿಧ ರೂಪದಲ್ಲಿ ಪರಿಣತವಾಗುವಂತೆ ಮಾಡಿಕೊಳ್ಳುತ್ತದೆ. ಆಗಲೇ ಅನೇಕ ವಿಧವಾದ ಪ್ರಾಣಿಗಳ ಸೃಷ್ಟಿ ಸಂಭವಿಸುವದು. ಜಗನ್ಮಾತೆಯೆನಿಪ ಅದು ತನ್ನ ಶಿಶುಗಳ ಜೀವನಾರೋಗ್ಯಕ್ಕೋಸ್ಕರ ಮತ್ತು ತ್ರಿವರ್ಗ[5]ಸಿದ್ಧಿಗೋಸ್ಕರ ಮೊಟ್ಟಮೊದಲು ಬ್ರಹ್ಮದೇವನಿಗೆ ಶಬ್ದಬ್ರಹ್ಮರೂಪದಲ್ಲಿರುವ ವೇದವಾಣಿಯ ನಾದರೂಪದ ಸಾಕ್ಷಾತ್ಕಾರವನ್ನು ಮಾಡಿಸಿತು. ಅವನ ಮುಖಾಂತರ ಋಷಿಗಳು ತಪಸ್ಸಿನ ಫಲ ಸ್ವರೂಪದಂತೆ ನಾದರೂಪದ ಆ ಶಬ್ದ ಬ್ರಹ್ಮವನ್ನು ಪಡೆದರು. ಆಗ ಅವರು ಪ್ರತ್ಯಕ್ಷ ಮತ್ತು ಅನುಮಾನಾದಿ ಪ್ರಮಾಣಗಳಿಂದ

---

3) ಶಬ್ದೋತ್ಪತ್ತಿ ಸ್ಥಾನ- ಉದಾ ಅಕುಹವಿಸರ್ಜನೀಯಾನಾಂ ಕಂಠಃ

4) ನೃತ್ತಾವಸಾನೇ ನಟರಾಜರಾಜೋ ನನಾದ ಢಕ್ಕಾಂ ನವಪಂಚವಾರಂ ।
ಉದ್ಧರ್ತುಕಾಮಃ ಸನಕಾದಿಸಿದ್ಧಾನೇತದ್ವಿಮರ್ಶೇ ಶಿವಸೂತ್ರಜಾಲಮ್ ॥ ವ್ಯಾಕರಣ ಪರಂಪರಾ –

5) ತ್ರಿವರ್ಗ ಎಂದರೆ ಧರ್ಮ, ಅರ್ಥ, ಕಾಮ, ಮೋಕ್ಷ ಸೇರಿಸಿದರೆ ಚತುರ್ವರ್ಗ.

ಅದರ ಫಲನಿಷ್ಪತ್ತಿಯು ಬಗೆ ಖಾತ್ರಿ ಮಾಡಿಕೊಂಡರು. ನಂತರ ತಮ್ಮ ಸಂತತಿಯ ತ್ರಿವರ್ಗ ಸಿದ್ಧಿ ಗೋಸ್ಕರ ಈ ವೇದರೂಪವಾದ ನಿಕ್ಷೇಪವನ್ನು ಬಹಳ ಪ್ರಯಾಸದಿಂದ, ತ್ಯಾಗಮನೋಬುದ್ಧಿಯಿಂದ ರಕ್ಷಿಸಿಕೊಂಡು ಬಂದರು. ಶಾಶ್ವತವಾದ ಈ ವೇದವಾಣಿಯು ಹೀಗೆ ಗುರುಶಿಷ್ಯ ಪರಂಪರೆಗನುಸರಿಸಿ ಈ ರೀತಿಯಾಗಿ ನಡೆದು ಬಂದಿತು.

ಈ ವೇದಗಳ ಸಾಕ್ಷಾತ್ಕಾರದ ವಿಷಯದಲ್ಲಿ ಹೀಗೊಂದು ಸಂಶಯ ಉಂಟಾಗಬಹುದು. ಋಷಿಗಳು ಸಾಕ್ಷಾತ್ಕರಿಸಿಕೊಂಡ ವೇದ ಬ್ರಹ್ಮನಾದವು ಚಿನ್ಮಯ ಶಕ್ತಿಯ ಯಾವ ಬಡಿತದ ಪರಿಣಾಮ ಅಥವಾ ಫಲ ಸ್ವರೂಪ ಆಗಿದೆ ? ಇವನ್ನು ಹೀಗೆ ಪರಿಹರಿಸಬಹುದು. ಈ ಪ್ರಕ್ರಿಯೆಯಲ್ಲಿ 'ಇಚ್ಛಾಶಕ್ತಿ' ಅಥವಾ ಸೃಷ್ಟಿಯ ಸಂಕಲ್ಪವು ಕಾಯಾಗ್ನಿ ಇದ್ದಂತೆ ನಿಶ್ವಾಸ ಸ್ಥಾನಾಪನ್ನವಾದ ಆ ಚಿತ್‌ಶಕ್ತಿಯ ಚೇಷ್ಟೆಯು ಅಗ್ನಿತತ್ತ್ವ. ಕಾಲಸ್ಪಂದವು ವಾಯು ತತ್ತ್ವವಿದ್ದಂತೆ. ಹೀಗಿರುವಾಗ ಅಗ್ನಿ ತತ್ತ್ವ ರೂಪದಲ್ಲಿರುವ ಕಾಯಾಗ್ನಿಯು ವಾಯುತತ್ತ್ವ ರೂಪದಲ್ಲಿರುವ ಕಾಲಸ್ಪಂದವನ್ನು ಪ್ರೇರಿಸುತ್ತದೆ. ಆಗ ಅದರಿಂದ ಪಂಚಭೂತಗಳ ಸ್ವರೂಪದಲ್ಲಿರುವ ಸ್ವರತಂತ್ರಿಗಳಲ್ಲಿ ವಾಯುವಿನ ಆಘಾತ ಉಂಟಾಗುತ್ತದೆ. ಅದರಿಂದ ಶಬ್ದ ಉತ್ಪನ್ನವಾಗುವದು.

ದೇಹದಲ್ಲಿ ಯಾವ ತರಹದ ಪ್ರಕ್ರಿಯೆ ಇದೆಯೋ ಅದೇ ತರಹ ಈ ಬ್ರಹ್ಮಾಂಡದಲ್ಲಿಯೂ ಇದೆ ಎಂದು ತಿಳಿಯಬಹುದು.

ಇದೆಲ್ಲ ವಿವರಣೆಯಿಂದ—ಯಾವದೇ ಶಬ್ದವು ನಿಶ್ವಾಸದ ಆಘಾತ ಅಥವಾ ಬಡಿತ ಅಥವಾ ಸ್ಪಂದನದಿಂದಲೇ ಉಂಟಾಗುವದೆಂಬ—ಸಿದ್ಧಾಂತವು ಸ್ಪಷ್ಟವಾಗುವದು. ಅಲೌಕಿಕವಾದ ವೇದ ಮತ್ತು ಲೌಕಿಕ ಶಬ್ದಗಳಲ್ಲಿ ವ್ಯತ್ಯಾಸವಿಷ್ಟೇ :—ಶಬ್ದ ಬ್ರಹ್ಮರೂಪವಾದ ವೇದವು ಚಿನ್ಮಯವಾದ ಮಾತೃಶಕ್ತಿಯ ನಿಶ್ವಾಸದ [6] ಆಘಾತದಿಂದ ಉಂಟಾಗುವದೆಂದು ಅದು ಅಪೌರುಷೇಯವಾಗಿದೆ. ಬೇರೆ ಬೇರೆ ಪ್ರಾಣಿಗಳ ನಿಶ್ವಾಸದ ಬಡಿತದಿಂದ ಲೌಕಿಕ ಶಬ್ದವು ಉತ್ಪನ್ನವಾಗುವದೆಂದು ಅದು ಪೌರುಷೇಯ. [7] ಈ ಚಿದಾತ್ಮಕ ಶಕ್ತಿಯು ನಿತ್ಯ. ಅದರ ನಿಶ್ವಾಸ ಸ್ಥಾನಾಪನ್ನವಾದ ಕಾಲಸ್ಪಂದ ಶಕ್ತಿಯೂ ಕೂಡ ನಿತ್ಯವಾಗಿಯೇ ಪ್ರವೃತ್ತವಾಗಿರುವದರಿಂದ ವೇದಗಳ ಪ್ರಾದುರ್ಭಾವ ಕಾಲವು ಗಣನಾತೀತವಾಗಿ ಅವು ಅಪೌರುಷೇಯವಾಗಿವೆ. ಅಂತೆಯೇ ಅವು ನಿತ್ಯವೂ ಆಗಿವೆ.

ಈ ಹಿನ್ನೆಲೆಯಲ್ಲಿ ವೇದಾಧ್ಯಯನದ ಅವಿಚ್ಛಿನ್ನ ಪರಂಪರೆಯಿಂದಲೂ ವೇದಗಳ ನಿತ್ಯತ್ವವನ್ನು ಸಾಧಿಸಬಹುದು. ಈಗ ಯಾವ ರೀತಿಯಲ್ಲಿ ಗುರುಪರಂಪರೆಯಿಂದ ಶಿಷ್ಯರು ವೇದಾಧ್ಯಯನ ಮಾಡುವರೋ ಹಾಗೇ ಪೂರ್ವಕಾಲದಲ್ಲಿಯೂ ಅದು ಅದೇ ರೀತಿಯಲ್ಲಿ ಪ್ರಚಲಿತವಾಗಿತ್ತು. ಹೀಗೆ ವೇದ 'ನಿತ್ಯ' ಎಂದು ಪೂರ್ವಮೀಮಾಂಸಕರು ಪ್ರತಿಪಾದಿಸುತ್ತಾರೆ. [8]

ವೇದ ದೃಷ್ಟಿಯಲ್ಲಿ ಇನ್ನೊಂದು ವಿಚಾರ. ಯಾವದೇ ಕಾಲದಲ್ಲಾಗಲಿ ಅಧ್ಯಾಪಕರು ನಿದ್ದೆ ಎಚ್ಚರಾದ ಮೇಲೆ ಮುಂಜಾನೆ ಶಿಷ್ಯರಿಗೆ ಅಧ್ಯಾಪನ ಮಾಡುತ್ತಾರೆ. ಆಗ ರಾತ್ರಿಯಲ್ಲಿ ಆ ವಿದ್ಯೆಯು ನಾಶವಾಗಿರುತ್ತದೆ ಅಥವಾ ಸಂಪೂರ್ಣವಾಗಿ ಮರೆತು ಹೋಗಿರುತ್ತದೆ ಎಂದರ್ಥವಲ್ಲ.

---

6) ವಿಶೇಷ ವಿವರಣೆ:— ಅಸ್ಯ ಮಹತೋ ಭೂತಸ್ಯ ನಿಶ್ವಸಿತಮೇತತ್—ಯದ್‌ಋಗ್ವೇದೋ ಯಜುರ್ವೇದಃ ಸಾಮವೇದೋऽಥರ್ವಾಂಗಿರಸಃ :— ಬೃ. ಉ. ೩-೪ ೧೦

7) ಪುರುಷ ನಿರ್ಮಿತವಾದದ್ದು ಪೌರುಷೇಯ. ವೇದ ಪುರುಷ ನಿರ್ಮಿತವಲ್ಲ ಆದ್ದರಿಂದ ಅಪೌರುಷೇಯ.

8) ವೇದಸ್ಯಾಧ್ಯಯನಂ ಸರ್ವಂ ಗುರ್ವಧ್ಯಯನಪೂರ್ವಕಂ ।
ವೇದಾಧ್ಯಯನ ಸಮಾನ್ಯಾತ್ ಅಧುನಾಧ್ಯಯನಂ ಯಥಾ ॥ ಮೀ. ನ್ಯಾ.

ಅಲ್ಲದೇ ಶಿಷ್ಯರಿಗೆ ಕೊಡುವ ವಿದ್ಯೆ ಹೇಗಿತ್ತೋ ಹಾಗೇ ಅದನ್ನು ಹೇಳುತ್ತಾರೆ. ಹೊರತು, ಅಮೂಲಾಗ್ರವಾಗಿ ಆ ವಿದ್ಯೆಯನ್ನು ನಿರ್ಮಿಸಿ ಹೇಳುತ್ತಾರೆ ಎಂದರ್ಥವಲ್ಲ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಆ ವಿದ್ಯೆಯ ಕರ್ತೃಗಳು ಅವರೇ ಆಗಿರುತ್ತಾರೆ ಎಂದಲ್ಲ. ಇದೇ ರೀತಿಯಾಗಿ ಪ್ರಲಯ ಕಾಲದಲ್ಲಿ ಚಿತ್‌ಶಕ್ತಿಯುಳ್ಳ ಭಗವಾನ್ ನಾರಾಯಣನು ಯೋಗ ನಿದ್ರೆಯಲ್ಲಿರುತ್ತಾನೆ. ಸೃಷ್ಟಿಯ ಆರಂಭದಲ್ಲಿ ಎಚ್ಚರವಾದಂತಾಗಿ ಬ್ರಹ್ಮದೇವನಿಗೆ ವೇದವನ್ನು ಕರುಣಿಸುತ್ತಾನೆ. ಆದ್ದರಿಂದ ಮೇಲೆ ಹೇಳಿದ ಉದಾಹರಣೆಯಂತೆ ಭಗವಾನ್ ನಾರಾಯಣನು ವೇದಗಳ ರಚನೆ ಮಾಡಲಿಲ್ಲ. ಶಾಶ್ವತವಾಗಿಯೇ ಇದ್ದ ಆ ವೇದ ವಿದ್ಯೆಯನ್ನು ಸ್ಮರಿಸಿ ಪ್ರಕಟ ಪಡಿಸಿದನು. ಹೀಗೆ ಅನೇಕ ಕಲ್ಪಗಳಿಂದ ಅನಾದಿಯಾಗಿದ್ದ ವೇದವು ನಾಶವಾಗದೇ, ಸೃಷ್ಟವೂ ಆಗಿರದೇ ನಿತ್ಯವಾಗಿರುತ್ತದೆ. ಅಲ್ಲದೇ ಜಠರಾಗ್ನಿಯಿಂದ ಪ್ರೇರಿಸಲ್ಪಟ್ಟ ವಾಯುವಿನ ಬಡಿತದಿಂದ ಯಾವುದಾದರೂ ಹೊಸದಾದ ರಚನೆಯಾಯಿತೆಂದರೆ ಮಾತ್ರ ಅದು ಪೌರುಷೇಯವೆಂದಾಗುವದು. ವೈದಿಕ ಶಬ್ದಗಳು ಮಾತ್ರ ಯಾರ ಉದರ ವಾಯುವಿನ ಹೊಸ ರಚನೆಯಾಗಿರುವದಿಲ್ಲವಾದ್ದರಿಂದ ಅವು ಅಪೌರುಷೇಯ. ಅಲ್ಲದೆ ಅವು ನಾಶಕ್ಕೆ ಪ್ರತಿಯೋಗಿ ಆಗುವದಿಲ್ಲವಾದ್ದರಿಂದ ನಿತ್ಯವಾಗಿಯೇ ಇರುತ್ತದೆ.

ಮಹಾಭಾರತವು ವ್ಯಾಸ ಮಹರ್ಷಿಯ ನಿಶ್ವಾಸ ಪ್ರಸೂತವಾದ ಗ್ರಂಥವಾಗಿರುತ್ತದೆ. ಅಂದರೆ ವ್ಯಾಸ ಮಹರ್ಷಿಗಳಿಗಿಂತಲೂ ಮೊದಲು ಅವರ ನಿಶ್ವಾಸ ರೂಪವಾದ ಈ ಭಾರತದ ಅಸ್ತಿತ್ವವನ್ನು ಕಲ್ಪಿಸಲು ಸಾಧ್ಯವಿಲ್ಲ. ಆದ್ದರಿಂದ ಅದು ಪೌರುಷೇಯ. ವೇದಗಳು ಹಾಗಲ್ಲ. ಋಷಿಗಳ ಬ್ರಹ್ಮರೂಪವಾದ ವೇದವನ್ನು ಶ್ರವಣ ಮಾಡಿ ಪಡೆದರು. ಅರ್ಥಾತ ಸಾಕ್ಷಾತ್ಕರಿಸಿಕೊಂಡರೆಂದು ಅವರು ಮಂತ್ರದ್ರಷ್ಟಾರರೇ ಹೊರತು ಮಂತ್ರಕರ್ತಾರರಲ್ಲ. [9]

ಇದೇ ಹಿನ್ನೆಲೆಯಲ್ಲಿ, ಇದೇ ದಿಸೆಯಲ್ಲಿ ಇನ್ನೊಂದು ಯುಕ್ತಿಯಿಂದ ವಿಚಾರಿಸಬಹುದು. ಒಂದು ವೇಳೆ ವೇದಕ್ಕೆ ಯಾರಾದರೂ ಕರ್ತೃಗಳಿದ್ದದ್ದೇ ಆದರೆ, ಅವರನ್ನು ಯಾರೂ ನೆನೆಸಿಕೊಂಡು ಬರಲು ಸಾಧ್ಯವಾಗದಂತಹ ಸ್ಥಿತಿ ಹೇಗೆ ಬರಲು ಸಾಧ್ಯ ? ಇಂತಹ ಅಪೂರ್ವ ಗ್ರಂಥಗಳಿಗೆ ಕರ್ತೃಗಳಿದ್ದದ್ದೇ ಆದರೆ ಅವರನ್ನು ಎಂದಾದರು ಯಾರಾದರೂ ಮರೆಯಲು ಸಾಧ್ಯವಿದೆಯೇ ? ತಮ್ಮ ಜೀವವನ್ನು ಪಣವಾಗಿಟ್ಟಾದರೂ ಆ ವೇದ ಪರಂಪರೆಯನ್ನೇ ಸ್ವಲ್ಪವೂ ವ್ಯತ್ಯಾಸವಾಗದಂತೆ, ನಶಿಸಿ ಹೋಗದಂತೆ ಸರ್ವತೋಮುಖವಾಗಿ ಸಂರಕ್ಷಿಸಿಕೊಂಡು ಬರುವವರಿಗೆ ಅದರ ಕರ್ತೃಗಳ ಹೆಸರನ್ನು ನೆನಪಿಟ್ಟು-ಕೊಳ್ಳುವದು ಅಸಾಧ್ಯದ ಮಾತಾಗಲು ಸಾಧ್ಯವೆ ! ಕರ್ತೃಗಳಿದ್ದದ್ದೇ ಆದರೆ ಅವರ ಹೆಸರು ನೆನಪಿಟ್ಟುಕೊಳ್ಳುವದು ಇವರಿಗೆ ಹೊರೆಯಾಗಿದ್ದೀತೆ ? ಮರೆಯುವ ಸಾಧ್ಯತೆಯೇ ಇಲ್ಲದಿರುವಾಗ ಅದು ಅದಕ್ಕೆ ಕರ್ತೃ ಇಲ್ಲವೆಂಬುದೇ ಯುಕ್ತಸಿದ್ಧವಾಗುವದು. ಇದನ್ನೇ ಮೀಮಾಂಸಕರು 'ಕರ್ತ್ರಸ್ಮರಣಾತ್' ಎಂದು ಕರೆಯುತ್ತಾರೆ. ಇದರಿಂದಲೂ ವೇದ ಅಪೌರುಷೇಯವೆಂದು ಸಿದ್ಧವಾಗುವದು.

ನಾಲ್ಕು ವೇದಗಳು ಈ ಮಹಾಭೂತದ ನಿಶ್ವಾಸ [10] ಎಂದು ಶ್ರುತಿಯಲ್ಲಿ ಹೇಳಿದಾಗ ಪರಮಾತ್ಮನೇ ವೇದಗಳ ಕರ್ತಾ ಆದ್ದರಿಂದ ವೇದಗಳು ಪೌರುಷೇಯ — ಹೀಗೊಂದು ವೇದಗಳ ಅಪೌರುಷೇಯತ್ವದ ಬಗ್ಗೆ ಆಕ್ಷೇಪ ಉಂಟು. ಆದರೆ ಇಲ್ಲಿ "ನಿಶ್ವಸಿತ" ಎಂಬಲ್ಲಿ ಸಹಜವಾಗಿಯೇ

೯) ವಿಶೇಷ ವಿವರಣೆಗೆ ನೋಡಿರಿ — 'ಶ್ರುತಿ ಪ್ರಾಮಾಣ್ಯ ಸರ್ವಸ್ವ'—ಪಂಡಿತರಾಜ, ಗುರುವರ್ಯ, ರಾಜೇಶ್ವರ ಶಾಸ್ತ್ರಿಗಳು, ದ್ರವಿಡ, ಕಾಶಿ, ಸದ್ಗುರು ಬ್ರಹ್ಮಾನಂದ ಮಹಾರಾಜರ ಆರಾಧನಾ ಸುವರ್ಣ ಮಹೋತ್ಸವಾಂಕ ವೆಂಕಟಾಪೂರ, ಜಿ. ಧಾರವಾಡ, ೧೯೭೮,

10) ಮೇಲಿನ ವಿವರಣೆ ಸಂಖ್ಯೆ —6

ನಿಶ್ವಾಸವಂತೆ ವೇದಗಳು ಬಂದವು ಎಂಬ ತಾತ್ಪರ್ಯದಿಂದ ಅರ್ಥಾನುಸಂಧಾನ ಪೂರ್ವಕವಾದ ಉಚ್ಚಾರಣೆ ಇಲ್ಲ ಎಂಬುದು ಸ್ಪಷ್ಟವೇ ಇದೆ. ಅರ್ಥವನ್ನು ತಿಳಿದ ಮೇಲೆ ವಾಕ್ಯ ರಚನೆ (ಅರ್ಥಂ ಬುಧ್ವಾ ವಾಕ್ಯ ರಚನಾ) ಎಂಬ ನ್ಯಾಯದಂತೆ ತನ್ನ ಜ್ಞಾನದಲ್ಲಿ ವಿಷಯವಾದ ಅರ್ಥದ ಅಭಿಸಂಧಾನ (ಸ್ಮರಣೆ) ಪೂರ್ವಕವಾದ ಉಚ್ಚಾರಣೆಗೆ ವಿಷಯವಾಗುವುದೇ ಪೌರುಷೇಯತ್ವ ಎಂಬ ಸಾಮಾನ್ಯ ವ್ಯಾಖ್ಯೆ[11] ಇರುವಾಗ ವೇದಗಳಿಗೆ ಅರ್ಥಾನುಸಂಧಾನ ಪೂರ್ವಕವಾದ ಉಚ್ಚಾರಣೆ ಇಲ್ಲವಾದ್ದರಿಂದ ಅವು ಅಪೌರುಷೇಯ ಹೀಗೆ ಈಶ್ವರನೂ ಕೂಡ ಅವುಗಳ ಕರ್ತೃ ಆಗಲಾರನು ಎಂಬುದನ್ನು ತೋರಿಸಬಹುದು.

ಇನ್ನು ವೇದಗಳಲ್ಲಿ ಅನೇಕ ದೋಷಗಳಿವೆ ಎಂದು ಕೆಲವರು ಆಕ್ಷೇಪಿಸುವುದುಂಟು. ಅವರ ದೃಷ್ಟಿಯಲ್ಲಿ ಕೆಲವು ಸಂದಿಗ್ಧಾರ್ಥವುಳ್ಳಂಥವುಗಳು, ವಿಪರೀತಾರ್ಥ ಹೇಳುವಂಥವುಗಳು ಕೆಲವು, ಮತ್ತೆ ಕೆಲವು ಅನುಭವ ವಿರುದ್ಧವಾದ ವಿಷಯವನ್ನು ಹೇಳುವವು, ಇನ್ನು ಕೆಲವು ಲೋಕ ಪ್ರಸಿದ್ಧವಾದ ಪದಾರ್ಥಗಳ ಅನುವಾದಕಗಳೂ ಆಗಿರುತ್ತವೆ. ಹೀಗೆ ಅನೇಕ ರೀತಿಯಲ್ಲಿ ಕೆಲವರು ವೇದಗಳಲ್ಲಿ ದೋಷ ಗಳನ್ನು ಎಣಿಸುವರು.

ಆದರೆ ನಿರುಕ್ತ, ವ್ಯಾಕರಣಾದಿ ವೇದಾಂಗಗಳ ಸಹಾಯದಿಂದ ಅವುಗಳ ಸಾರ್ಥಕ್ಯವನ್ನು ವಿಶದ ಪಡಿಸಬಹುದು. ಉಪಕ್ರಮೋಪಸಂಹಾರಾದಿ ಆರು ತಾತ್ಪರ್ಯ ನಿರ್ಣಾಯಕ ವಿಧಾನಗಳಿಂದ ಸರಿಯಾಗಿ ಅರ್ಥೈಸಿದಾಗ ಸಂಶಯವಾಗಲಿ, ವಿಪರೀತಾರ್ಥವಾಗಲಿ ಉಳಿಯಲು ಸಾಧ್ಯವಿಲ್ಲ. 'ಮೃದಬ್ರವೀತ್' ಮುಂತಾದವುಗಳಲ್ಲಿ ಅನುಭವ ವಿರೋಧ ಬಂದರೂ ಅಂತಹ ವಾಕ್ಯಗಳಲ್ಲಿ ಅಭಿಮಾನಿ ದೇವತಾ ವಾಚ್ಯವಾದುದು ಎಂಬುದು ಸ್ಪಷ್ಟವೇ ಇದೆ. ಇನ್ನು ಅನುಗ್ರಾಹಕ ಬುದ್ಧಿಯಿಂದ ವಿಹಿತವಾದ ಕೆಲವು ಮಂತ್ರಗಳನ್ನು ಅನುವಾದಕವೆಂದು ತಪ್ಪು ಕಲ್ಪನೆ ಮಾಡುವದು ಸಹಜವೇ ಇದೆ. ಹೀಗೆ ಸರಿಯಾಗಿ ಅರ್ಥೈಸಿದಾಗ ಅಪೌರುಷೇಯ ಮತ್ತು ನಿತ್ಯವಾಗಿರುವ ವೇದಗಳ ನಿರ್ದುಷ್ಟತ್ವವು ನಿಸ್ಸಂದಿಗ್ಧವಾಗಿ ತೋರುವದು. ಒಟ್ಟಾರೆ ಒಳ್ಳೆಯ ಗೆಳೆಯನಂತೆ ಅತ್ಯಂತ ಹಿತಕಾರಿಯಾದ ವೇದ ಗಳನ್ನು, ನಿಷ್ಕಾರಣವಾಗಿಯಾದರೂ ಅಧ್ಯಯನ ಮಾಡಿ ಶರಣು ಹೋಗುವದರಲ್ಲಿಯೇ ಮಾನವನ ಕಲ್ಯಾಣವಿದೆ ಎಂಬುದನ್ನು ನಾವು ದೃಢಪಡಿಸಿಕೊಳ್ಳಬೇಕು.

**ಡಾ. ವೇಣೀಮಾಧವ ಶಾಸ್ತ್ರೀ ಜೋಶಿ**
ಸಂಸ್ಕೃತ ಪ್ರಾಧ್ಯಾಪಕರು,
ಕರ್ನಾಟಕ ಆರ್ಟ್ಸ್ ಕಾಲೇಜು,
ಧಾರವಾಡ

11) ಸ್ವೋತ್ಪ್ರೇಕ್ಷಾ ವಿಷಯಾರ್ಥಾಭಿಸಂಧಿಪೂರ್ವಕೋಚ್ಚಾರಣ ವಿಷಯತ್ವಂ ಪೌರುಷೇಯತ್ವಂ — 'ಭೂಮಿಕಾ'— ವಿದ್ವಾನ್ ನಾಗೇಶ ಶಾಸ್ತ್ರೀ ಉಪ್ಪಿನ ಬೆಟಗೇರಿ, 'ಕೃಷ್ಣಯಜುರ್ವೇದ ಪ್ರಕರಣ ಕೌಮುದೀ' (ಪ್ರಥಮೋ ಭಾಗಃ) ವಾಮನ ಶಾಸ್ತ್ರಿ ಕಿಂಜವಡೇಕರ, ಪುಣೆ,—1860

ಶ್ರೀಃ

ಶ್ರೀಮತೇ ರಾಮಾನುಜಾಯನಮಃ

# ವೇದ-ವೇದಾನ್ತಗಳ, ಮತ್ತು, ದಿವ್ಯ ಪ್ರಬಂಧಗಳ ಏಕಾರ್ಥತೆ

ವೇದದಲ್ಲಿ ಪೂರ್ವಭಾಗ (ಕರ್ಮಕಾಂಡ)ದಲ್ಲೂ ವಿಷ್ಣುವೆಂಬ ನಾಮಾಂಕಿತವುಳ್ಳ ನಾರಾಯಣನೇ ಜಗತ್ಕಾರಣನು, ಸರ್ವಸ್ಮಾತ್ಪರನು, ಸಕಲ ಜಗದ್ರಕ್ಷಕನು, ಸರ್ವವ್ಯಾಪಕನು, ಸಕಲ ಕಲ್ಯಾಣ ಗುಣಾಕರನು, ಸರ್ವೇಶ್ವರನು, ಶ್ರೀ ವಲ್ಲಭನು, ಇತ್ಯಾದಿಯಾಗಿ ಸ್ಪಷ್ಟವಾಗಿ ಬಣ್ಣಿಸಿರುವುದು "ವೇದ ಸಂಸ್ಕೃತಿಯ ಪರಿಚಯ"ವೆಂಬ ಗ್ರಂಥಗಳ ಪರಿಚಯದಿಂದಲೇ ಎಲ್ಲರಿಗೂ ಚೆನ್ನಾಗಿ ಮನದಟ್ಟಾಗಿರುವುದೆಂಬುದರಲ್ಲಿ ಸಂದೇಹವಿಲ್ಲ.

ವೇದಾನ್ತ (ವೇದದ ಕೊನೆಯ ಭಾಗವಾದ ಉಪನಿಷತ್ತುಗಳು) ಗಳಲ್ಲೂ ಇದೇ ವಿಷಯಗಳಿದ್ದರೂ, ಸತ್, ಬ್ರಹ್ಮ, ಆತ್ಮಾ, ಮೊದಲಾದ ಸಾಮಾನ್ಯ ಶಬ್ದಗಳಿಂದ ವ್ಯವಹರಿಸಿ ಮನಸ್ಸಿಗೆ ಅನುಮಾನ ಮತ್ತು ತೊಡಕುಗಳುಂಟಾಗುವಂತಿರುವುದೂ ಸಹಜವೇ. ಆದರೆ ಈ ಅಂಶವನ್ನು ಸ್ಪಷ್ಟಪಡಿಸಲು ಸಾಮಾನ್ಯ ವಿಶೇಷ ನ್ಯಾಯ (ಅಥವಾ ಪಶುಚ್ಛಾಗನಯ) ವೆಂಬ ಮೀಮಾಂಸಾ ಶಾಸ್ತ್ರದ ತೀರ್ಮಾನ (ಅಧಿಕರಣ–ಜಡ್ಜ್‌ಮೆಂಟ್) ದಂತೆ ಸಾಮಾನ್ಯ ವಾಚಕವಾದ ಸಚ್ಛಬ್ದಕ್ಕೆ ಬ್ರಹ್ಮಶಬ್ದದಲ್ಲೂ, ಆ ಬ್ರಹ್ಮ ಶಬ್ದಕ್ಕೆ ಆತ್ಮ ಶಬ್ದದಲ್ಲಿಯೂ ಪರ್ಯವಸಾನ ಮಾಡಿ, ಹೀಗೆ ಎಲ್ಲಕ್ಕೂ ಆತ್ಮನಾದವನು "ಏಕೋ ಹ ವೈ ನಾರಾಯಣ ಆಸೀತ್" ಎಂಬ ಮಹೋಪನಿಷದ್ವಾಕ್ಯದಂತೆ ನಾರಾಯಣನೆಂದು ಹೇಳಿ, ಅವನಲ್ಲೇ ಸತ್, ಬ್ರಹ್ಮ, ಆತ್ಮಾ ಶಬ್ದಗಳೆಲ್ಲವೂ ಪರ್ಯವಸಾನವನ್ನು ಹೊಂದುತ್ತವೆಂದು ತೀರ್ಮಾನಿಸಿದೆ. ಅವನೇ ಜಗತ್ಕಾರಣನೆಂದೂ ತೀರ್ಮಾನಿಸಿದೆ.

ಇದನ್ನೇ ನಮ್ಮಾಳ್ವಾರ್‌ರವರು ತಮ್ಮ ತಿರುವಾಯ್ಮೊಳಿಯಲ್ಲಿ ಮೊದಲನೇ ಪದ್ಯದಲ್ಲೇ "ಅವನ್ಯ-ಯರರು" ಎಂದೂ, ಎರಡನೇ ದಶಕದಲ್ಲಿ "ಇರೈಶೇರ್ಮಿನ್" ಎಂದೂ "ಅರ್ವ–ಇರೈ"–ಎಂದು ಸಾಮಾನ್ಯ ವಾಚಕ ಶಬ್ದದಿಂದ ಹೇಳಿ, ಅವನಾರೆಂದರೆ—"ವಣ್ಪುಹಳ್‌ನಾರಣ್" ಎಂದೂ ಅದೇ ಎರಡನೇಯ ದಶಕದ ಕೊನೆಯಲ್ಲಿ ನಾರಾಯಣನೆಂಬ ಸಮಾಖ್ಯೆಯಿಂದ ನಿರೂಪಿಸಿ, ಸಕಲ ಕಲ್ಯಾಣ ಗುಣಾಕರನೂ ಅವನೇ ಎಂದು, ಇದೇ ಸಾಮಾನ್ಯ ವಿಶೇಷ ನ್ಯಾಯಪರ್ಯವಸಿತಾರ್ಥವನ್ನು ಸ್ಪಷ್ಟವಾಗಿ ಪ್ರತಿಪಾದಿಸಿರುವರು. ಇದನ್ನೇ "ಒನ್ರುಂತೇವುಂ" ಎಂಬ ನಾಲ್ಕನೆಯ ಶತಕದ ಹತ್ತನೇ ದಶಕದಲ್ಲಿ—ಒಂದನೇ ಪಾಶುರದಲ್ಲಿ "ನ ಬ್ರಹ್ಮ ನೇಶಾನಃ ನೇಮೇ ದ್ಯಾವಾಪೃಥಿವೀ ನಾಗ್ನಿರ್ನಸೂರ್ಯಃ" ಎಂಬ ಮಹೋಪನಿಷದ್ವಾಕ್ಯದಂತೆ ಬ್ರಹ್ಮ, ರುದ್ರ, ಆಕಾಶ, ಭೂಮಿ, ಸೂರ್ಯಚಂದ್ರರು, ಅಗ್ನಿ ಇವರೆಲ್ಲ ಯಾರೂ ಇಲ್ಲದಿದ್ದಾಗ ಅಂದರೆ ಯಾರೂ ಇಲ್ಲದ ಪ್ರಳಯ ಕಾಲದಲ್ಲಿ ನಾರಾಯಣನೊಬ್ಬನೇ ಇದ್ದನೆಂದೂ ಅವನಿಂದಲೇ ಜಗತ್ಸೃಷ್ಟಿಯಾಯಿತೆಂದೂ, "ಕಾರಣಂ ತು ಧ್ಯೇಯಃ" ಎಂಬ ಅಥರ್ವಶಿರಸ್ಸಿನ ವಾಕ್ಯದಂತೆ ಜಗತ್ಕಾರಣ ವಸ್ತುವನ್ನೇ ಧ್ಯಾನಿಸಬೇಕೇ ಹೊರತು–ಮತ್ತೆ ಚಿಲ್ಲರೆ ದೇವತಾಂತರಗಳನ್ನೇಕೆ ಅರಸುವಿರಿ" ? ಎನ್ನುತ್ತಾರೆ ಆಳ್ವಾರ್‌ರವರು.

"ತಮೀಶ್ವರಾಣಾಂ ಪರಮಂ ಮಹೇಶ್ವರಂ" "ಪರಾತ್ಪರಂ ಪುರಿಶಯಂ ಪುರುಷಂ" ಇತ್ಯಾದಿಗಳಲ್ಲಿ ಹೇಳುವ "ಸರ್ವೇಶ್ವರೇಶ್ವರ" ನೆಂಬ ವಿಷಯವನ್ನು "ಉಯರ್ವರವುಯರ್" ಎಂದು ಮೊದಲನೇ ಪದ್ಯದ ಮೊದಲನೇ ಪಾದದ ಮೊದಲನೆಯ ಪದದಲ್ಲೇ ಸ್ಪಷ್ಟವಾಗಿ ವಿವರಿಸಿರುವರು. "ಇವನಲ್ಲಿರುವ ಮೇಲ್ಮೆ–ಇದಕ್ಕಿಂತ ಮಿಗಿಲಾದ ಮೇಲ್ಮೆಯಿಲ್ಲದ್ದೂ" ಎಂದಿದ್ದಾರೆ. ಇದನ್ನೇ ಶ್ರುತಿಯೂ "ನ ತತ್ಸಮಶ್ಚಾಭ್ಯಾಧಿಕಶ್ಚ ದೃಶ್ಯತೇ" "ಇವನಿಗೆ ಸಮನಾದವನೇ ಇಲ್ಲ. ಮಿಗಿಲಾದವನು ಎಲ್ಲಿಂದ ತಾನೆ ಬಂದಾನು" ? ಎನ್ನುತ್ತದೆ.

ಪರಬ್ರಹ್ಮವು ನಿರ್ಗುಣವೆ ? ಸಗುಣವೆ ? ಎಂದು ಶಂಕೆ ಬಂದರೆ—ಅದ್ವೈತಿಗಳು "ನಿರ್ಗುಣಂ" "ಸರ್ವಸ್ಯ ವಶೀ ಸರ್ವಸ್ಯೇಶಾನಃ" "ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲ ಕ್ರಿಯಾ ಚ" ಇತ್ಯಾದಿಯಾಗಿ ಶ್ರುತಿಯು ನಿರ್ಗುಣವೆಂದೂ ಸಗುಣವೆಂದೂ ಹೇಳಿ, ಸಗುಣವೆಂದು ಹೇಳುವದಕ್ಕಿಂತ ನಿರ್ಗುಣವೆಂಬ ಶಾಸ್ತ್ರವೇ ಪ್ರಬಲವೆಂದು ಹೇಳಿ ಗೊಂದಲವೆಬ್ಬಿಸಿ ಕಡೆಗೆ ನಿರ್ಗುಣವೆಂದೇ ತೀರ್ಮಾನಿಸಿದರು.

- ಎರಡು ಶ್ರುತಿಗಳೂ ಸಮಂಜಸವಾಗಬೇಕಿದ್ದರೆ ಶ್ರುತಿಯ ಮತ್ತೊಂದು ವಾಕ್ಯವನ್ನೇ ತೆಗೆದು ಸಮಾಧಾನ ಹೇಳಬೇಕೆಂಬುದು ವೈದಿಕರ ಸಿದ್ಧಾಂತ. "ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ—ಸತ್ಯಕಾಮಸ್ಸತ್ಯಸಂಕಲ್ಪಃ" ಎಂಬ ಒಂದೇ ವಾಕ್ಯದಲ್ಲಿ–ಇವನಿಗೆ ಪಾಪ ಸಂಬಂಧವಿಲ್ಲ; ಮುದಿತನವಿಲ್ಲ; ಮರಣವಿಲ್ಲ; ದುಃಖವಿಲ್ಲ; ಹಸಿವಿಲ್ಲ; ದಾಹವಿಲ್ಲ;ವೆಂದು ಕೆಟ್ಟಗುಣಗಳಾವುವೂ ಇಲ್ಲವೆಂದೂ ಹೇಳಿ "ಇವನು ನೆನೆಸಿದ್ದೆಲ್ಲ ಸಿದ್ಧವಾಗಿಯೇ ಇದೆ; ಇವನ ಸಂಕಲ್ಪ ಸತ್ಯವಾದುದು" ಎಂದು ಸದ್ಗುಣಗಳನ್ನು ಹೇಳಿರುವುದರಿಂದ, ನಿರ್ಗುಣವೆಂದರೆ ಕೆಟ್ಟ ಗುಣಗಳಿಲ್ಲ–ವೆಂಬರ್ಥ ಸಹಜವೇ ಹೊರತು ಗುಣವಿಲ್ಲದವನೆಂದಲ್ಲ; ಸದ್ಗುಣಗಳಿವೆಯೆಂದೂ ಹೇಳಿರುವುದರಿಂದ ಸಗುಣವೇ ಬ್ರಹ್ಮವೆನ್ನುತ್ತಾರೆ ಆ ವೈದಿಕರು.

ಇಷ್ಟೆಲ್ಲವನ್ನೂ ಗೊಂದಲವಿಲ್ಲದೆ ಸುಲಭವಾಗಿ "ನಲಮುಡೈಯರ್ವ" ಎಂದು ಮೊದಲ ಪದ್ಯದಲ್ಲೇ "ಸಕಲ ಕಲ್ಯಾಣ ಗುಣಾಕರ"ನೆಂದರು ಆಳ್ವಾರ್ರುವರು. ಇದನ್ನು ವ್ಯಾಖ್ಯಾತರು ಬಹಳ ಸ್ವಾರಸ್ಯವಾಗಿ ನಿರೂಪಿಸಿದ್ದಾರೆ. "ಬ್ರಹ್ಮ ನಿರ್ಗುಣ"ವೆಂದು ಹೇಳುವವರ ಬಾಯಿ ಮುಚ್ಚಿಸಿದಂತೆ ಆಳ್ವಾರ್ರುವರು "ನಲಮುಡೈಯರ್ವ" ಎಂದರಲ್ಲಾ ! ಎಂದು ಆಶ್ಚರ್ಯ ಚಕಿತರಾಗುತ್ತಾರೆ. ಸಗುಣವೆಂದು ಹೇಳಿದ ಮಾತ್ರಕ್ಕೆ "ನಿರ್ಗುಣ"ವೆಂಬುದನ್ನು ಖಂಡಿಸಿದಂತಾಗಲಿಲ್ಲವಲ್ಲಾ ! ಎಂದು ಶಂಕಿಸಿ ಉತ್ತರಿಸುತ್ತಾರೆ. "ಸಿದ್ಧಾಂತವನ್ನು ನಿರೂಪಿಸಿದರೆ–ಅಪಸಿದ್ಧಾಂತ ತಾನೇ ತೊಲಗುವುದು" ಎನ್ನುತ್ತಾರೆ. ಇದಕ್ಕೆ ಸೊಗಸಾದ ದೃಷ್ಟಾಂತವನ್ನುಳವಡಿಸುತ್ತಾರೆ. "ನೆಲ್ಚೈಯ್ಯಪ್ಪುಲ್‌ತೇಯುಮಾಪ್ಪೋಲೇ" ಎಂದು. ರಾಗಿಯ ಕಣವನ್ನು ಮಾಡಬೇಕಾದರೆ ಕಣ ತುಳಿಸಿ, ಸಗಣಿಯಿಂದ ಸಾರಿಸಿ ಸಿದ್ಧಪಡಿಸಿ ರಾಗಿಯನ್ನು ಬಡಿಯಬೇಕು. ಭತ್ತವನ್ನು ಬಡಿಯಬೇಕಾದರೆ ಗದ್ದೆಯ ಪಾತಿಯಲ್ಲೇ ಬಡಿಯುತ್ತಾರೆ. ಹತ್ತಾರು ಕಂತೆಗಳನ್ನು ಬಡಿಯುವ ವೇಳೆಗೆ ಕೂಳೆಗಳೆಲ್ಲಾ ಹೋಗಿ ಆ ಪಾತಿಯು ಸಾರಿಸಿದ ಕಣದಂತಾಗುತ್ತದೆ. "ಹುಲ್ಲು ಬಡಿದೂ ಆಯಿತು, ಕಣವೂ ಆಯಿತು" ಎಂಬಂತೆ ಎನ್ನುತ್ತಾರೆ.

ಶ್ರುತಿಯು "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ", "ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯಬಾಹ್ಯತಃ" ಎಂದು ಎಲ್ಲದರ ಒಳಗೂ ಹೊರಗೂ ವ್ಯಾಪಿಸಿರುವನು. "ಅಣೋರಣೀಯಾನ್ ಮಹತೋ ಮಹೀಯಾನ್" ಎಂಬಂತೆ ಅಣುವಾದ ವಸ್ತುವಿನಲ್ಲಿ ಅದಕ್ಕಿಂತ ಅಣುವಾಗಿಯೂ ಮಹತ್ತಾದ ವಸ್ತುವಿನಲ್ಲಿ ಅದಕ್ಕಿಂತ ಮಹತ್ತಾಗಿಯೂ ವ್ಯಾಪಿಸಿ ಚೇತನಾ ಚೇತನಗಳಲ್ಲೂ ವ್ಯಾಪಿಸಿರುವನೆನ್ನುತ್ತದೆ.

ಇದನ್ನೆ ಸಂದೇಹಬಾರದಂತೆ ಸ್ಪಷ್ಟವಾಗಿ ನಿರೂಪಿಸಿದ್ದಾರೆ ಆಳ್ವಾರ್ರವರು. "ಪರನ್ದತಣ್ ಪರವೈಯುಳ್-ನೀರ್‌ತೊರುಂಪರನ್ದುಳ್ಳ" ಎಂದು. ಒಂದೊಂದು ಜಲ ಪರಮಾಣುಗಳಲ್ಲೂ ವ್ಯಾಪಿಸಿರುವನು. ಹೇಗೆಂದರೆ ಚತುರ್ದಶ ಭುವನಗಳಿಂದ ಕೂಡಿರುವ ಈ ಬ್ರಹ್ಮಾಂಡದೊಳಗೆ ಒಬ್ಬನೇ ಮನುಷ್ಯನನ್ನು ಬಿಟ್ಟರೆ ಹೇಗೋ ಹಾಗೆ-ಅಷ್ಟು ವಿಸ್ತಾರವಾಗಿ ವ್ಯಾಪಿಸಿರುವನೆನ್ನುತ್ತಾರೆ ಆಳ್ವಾರ್ರವರು. ಈ ರೀತಿ ಸರ್ವವ್ಯಾಪಕನಿವನು.

"ಶ್ರದ್ಧಯಾ ದೇವೋ ದೇವತ್ವಮಶ್ನುತೇ" "ಯೇಚೇಮೇಽರಣ್ಯೇ ಶ್ರದ್ಧಾತಪಃ ಇತ್ಯುಪಾಸತೇ" "ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ" "ನೀಲತೋಯದಮಧ್ಯಸ್ಥಾ" ಇತ್ಯಾದಿ ಶ್ರುತಿಗಳು ಶ್ರೀ ಎಂದು ಅಸಾಧಾರಣನಾಮವುಳ್ಳ ಲಕ್ಷ್ಮೀದೇವಿಗೂ ಮತ್ತು ಭೂಮ್ಯಾದಿದೇವಿಗಳಿಗೂ ಇವನು ಪತಿ–ವಲ್ಲಭನೆನ್ನುತ್ತೇವೆ. ಇವನ್ನೆ ಆಳ್ವಾರ್ರವರು "ಮಲರ್‌ಮಹಳ್‌ವಿರುಮ್ಬು" "ತಿರುವುಡೈಯಡಿಹಳ್" "ತೇವಿಮಾರಾವಾರ್" "ತಿರುಮಡನ್ದೈಮಣ್ಮಡನ್ದೈ" ಇತ್ಯಾದಿಯಾಗಿ ಅನೇಕ ಸ್ಥಳಗಳಲ್ಲಿ ವಿವರಿಸಿದ್ದಾರೆ.

ಶ್ರುತಿಗಳು ನಾರಾಯಣನೇ ಸಕಲ ಜಗದ್ರಕ್ಷಕನೆಂದು ಹೇಳಿರುವುದನ್ನು ಆಳ್ವಾರ್ರವರು "ಹುಟ್ಟಿಸಿ ನಿನ್ನ ಹಣೆಯ ಬರೆಹದಂತೆ ಅನುಭವಿಸು" ಎಂಬುವವನನ್ನಾಶ್ರಯಿಸೋಣವೇ ? ನೆತ್ತಿಗಣ್ಣನ್ನು ತೆರೆದು ಎಲ್ಲವನ್ನು ಕೊಲ್ಲುವವನನ್ನು ಆಶ್ರಯಿಸೋಣವೆ ? ತಲೆ ಹೂ ಬಾಡದಂತೆ ಎಲ್ಲರ ತಲೆಯಲ್ಲೂ ತನ್ನ ಪಾದವನ್ನಿಟ್ಟು ಜಗತ್ತನ್ನೇ ರಕ್ಷಿಸುವವನ್ನಾಶ್ರಯಿಸುವುದುಚಿತವೆ ? ನೀನೇ ಯೋಚಿಸು "ಎಂದು ಮನ-ಮಾಡಿಕೊಡುತ್ತಾರೆ."

ಶ್ರುತಿಯು "ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ", ಮಧು ಪ್ರವಾಹ ಸುರಿಸುವ ಭಗವಂತನ ಪಾದಗಳೆಂದು ಕೊಂಡಾಡುತ್ತೆ. ಅದನ್ನೇ "ಉಮ್ತೇನೇ ಮಲರುಂ ತಿರುಪ್ಪಾದಂ" ಎಂದು ಮಧುಸ್ಯಂದಿ ಯಾದ ಅಡಿಗಳು "ಎನ್ನುತ್ತಾರೆ ಆಳ್ವಾರ್ರು.

ಹಾಗೆಯೇ "ಚಕ್ಷುರ್ದೇವಾನಾ ಮುತಮರ್ತ್ಯಾನಾಂ" ಎನ್ನುತ್ತೆ ಶ್ರುತಿ. ದೇವತೆಗಳಿಗೂ ಮನುಷ್ಯರಿಗೂ ಕಣ್ಣವನು ಎಂದು. ಇದನ್ನೇ ಆಳ್ವಾರ್ರವರು "ಕಣ್ಣಾವಾನೆನ್ನುಂಮಣ್ಣೋರ್‌ವಿಣ್ಣೋರ್ಕ್ಕು" ಎನ್ನುತ್ತಾರೆ. ದೇವಮಾನವರಿಬ್ಬರಿಗೂ ಕಣ್ಣಿನ ಸ್ಥಾನದಲ್ಲಿರುವವನು ಅಥವಾ ಕಣ್ಣಿನಂತೆ ಎಲ್ಲವನ್ನು ತೋರಿಸುವವನೆಂದೂ. ಹೀಗೆ ಇನ್ನೂ ಅನೇಕ ಭಾವಗಳಿವೆ.

ಈ ರೀತಿ ನಮ್ಮಾಳ್ವಾರ್ರವರು "ಛಾಂದೋಗ್ಯಸಾರ"ವೆಂದು ಪ್ರಸಿದ್ಧವಾದ ತಮ್ಮ ತಿರು–ವಾಯ್ಮೊಳಿಯೆಂಬ ಪ್ರಬಂಧದಲ್ಲಿ ಶ್ರುತಿಗೂ ಕೈಗೆ ಸಿಲುಕದ ಮತ್ತು ಸಂದಿಗ್ಧವಾಗಿರುವ ಅರ್ಥಗಳನ್ನು ಸ್ಪಷ್ಟಪಡಿಸಿ ವೇದಗಳ ಕ್ಲಿಷ್ಟ ಭಾಗಗಳನ್ನು ವಿವರಿಸಿದ್ದಾರೆ. ಸಾವಿರ ಪುಟಗಳಲ್ಲಿ ಬರೆದರೂ ಮುಗಿಯದ ಈ ವಿಷಯವನ್ನು ಪತ್ರಿಕೆಗೆ ಅಳವಡಿಸುವಂತೆ ಸಂಗ್ರಹಿಸಿರುವುದರಿಂದ ಇಷ್ಟೇ ಎಂದು ವಾಚಕರು ತಿಳಿಯಬಾರದು. ಆದ ಕಾರಣದಿಂದಲೇ ಈ ದಿವ್ಯಪ್ರಬಂಧಗಳು ದ್ರಾವಿಡವೇದವೆನಿಸಿಕೊಂಡಿರುವುವು. ಈ ನಮ್ಮಾಳ್ವಾರ್ರವರ ಒಂದು ಪ್ರಬಂಧದ ಏಕದೇಶದಲ್ಲೇ ಇಷ್ಟೆಲ್ಲವಿರುವಾಗ ಇತರ ಬೇರೆ ಪ್ರಬಂಧ ಗಳಲ್ಲೂ ಮಿಕ್ಕ ಆಳ್ವಾರುಗಳ ಪ್ರಬಂಧಗಳಲ್ಲೂ ಈ ಅರ್ಥಗಳೆಲ್ಲ ಅಡಗಿದ್ದು ಲೋಕೋಪಕಾರವಾಗಿದೆ-ಯೆಂಬುದರಲ್ಲಿ ಸಂದೇಹವಿಲ್ಲ.

ಬಾಲಧನ್ವಿ, ಜಗ್ಗು ಶ್ರೀ ಸುದರ್ಶನಾಚಾರ್ಯಃ
ಸಾಹಿತ್ಯ ವೇದಾನ್ತ ವಿದ್ವಾನ್,
ವಿಶ್ರಾಂತ ವಿಶಿಷ್ಟಾದ್ವೈತ ಸಿದ್ಧಾನ್ತ ಪ್ರಾಧ್ಯಾಪಕ
ಚಾಮರಾಜೇಂದ್ರ ಸಂಸ್ಕೃತ ಮಹಾ ಪಾಠಶಾಲೆ, ಬೆಂಗಳೂರು

# ಶ್ರೀ ಮಧ್ವಾಚಾರ್ಯರ ಋಗ್ಭಾಷ್ಯದ ವೈಶಿಷ್ಟ್ಯ

ವಿಶ್ವಧಾರಕವಾದ ಧರ್ಮ, ನ್ಯಾಯ ಮತ್ತು ನೀತಿಗಳಿಗೆ ಮೂಲಾಧಾರವು ವೇದವೇ ಹೊರತು ಮತ್ತೊಂದಲ್ಲವೆಂದು "ವೇದೋಽಖಿಲೋ ಧರ್ಮಮೂಲಂ" ಎಂಬ ಅಭಿಯುಕ್ತ ಉಕ್ತಿಯಿಂದ ವ್ಯಕ್ತ-ವಾಗುತ್ತದೆ. ಪ್ರತ್ಯಕ್ಷಾದಿ ಪ್ರಮಾಣಗಳಿಂದ ಪ್ರಮಿತವಾಗದ ಅಲೌಕಿಕವಾದ ಪುರುಷಾರ್ಥ ಸಾಧನವನ್ನು ತಿಳಿಸಿಕೊಡುವ ಗ್ರಂಥರಾಶಿಯೇ ವೇದರಾಶಿಯು.

ಪ್ರತ್ಯಕ್ಷೇಣಾನುಮಿತ್ಯಾ ವಾ ಯಸ್ತೂಪಾಯೋ ನ ಬುಧ್ಯತೇ ।
ಏತಂ ವಿದಂತಿ ವೇದೇನ ತಸ್ಮಾತ್ ವೇದಸ್ಯ ವೇದತಾ ॥

ಪರಮಾತ್ಮನ ಜ್ಞಾನವನ್ನು ಹುಟ್ಟಿಸುವ ವಿದ್ಯಾಸ್ಥಾನಗಳು ಒಟ್ಟು ಹದಿನಾಲ್ಕು (ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ, ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾ ಹ್ಯೇತಾಶ್ಚತುರ್ದಶ ॥). ಇವುಗಳಲ್ಲಿ ಒಂದಾದ ಅಪೌರುಷೇಯವಾದ ವೇದರಾಶಿಯನ್ನು ಶ್ರೀಮನ್ನಾರಾಯಣನ ಅವತಾರಭೂತರಾದ ಶ್ರೀ ವೇದವ್ಯಾಸರು ಋಕ್, ಯಜುಸ್, ಸಾಮ ಮತ್ತು ಅಥರ್ವ—ಎಂಬ ನಾಲ್ಕು ವಿಭಾಗಗಳನ್ನಾಗಿ ವಿಂಗಡಿಸಿದರು. ವೇದದ ರಹಸ್ಯಾರ್ಥವನ್ನು ತಿಳಿಯದೇ ವೇದಾಧ್ಯಯನವನ್ನು ಮಾಡುವುದು, ಭಾರ-ವನ್ನು ಹೊತ್ತು ನಿಂತ ಮೋಟು ಮರದಂತೆ ಎಂದು ಯಾಸ್ಕರು ನಿಂದಿಸಿದ್ದಾರೆ : ಸ್ಥಾಣುರಯಂ ಭಾರಹಾರಃ ಕಿಲಾಭೂದಧೀತ್ಯ ವೇದಂ ನ ವಿಜಾನಾತಿ ಯೋಽರ್ಥಂ, ಯೋಽರ್ಥಜ್ಞ ಇತ್ಸಕಲಂ ಭದ್ರ-ಮಶ್ನುತೇ ನಾಕಮೇತಿ ಜ್ಞಾನವಿಧೂತಪಾಪ್ಮಾ (ನಿರುಕ್ತ ೧. ೧೮). ಆದರೆ ಪ್ರಮಾಣ ಮೂರ್ಧನ್ಯ ವಾದ ಪರಮ ರಹಸ್ಯವಾದ ವೇದಮಂತ್ರಗಳ ಸರಿಯಾದ ಅರ್ಥವನ್ನು ತಿಳಿಯುವುದು ಅತ್ಯಂತ ಕಠಿಣ ತರ ಪ್ರಯತ್ನವಾಗಿದೆ.

ಈ ಪ್ರಯತ್ನದಲ್ಲಿ ಉದ್ಗೀಥಾಚಾರ್ಯ, ಸ್ಕಂದಸ್ವಾಮಿ, ನಾರಾಯಣ, ಹಸ್ತಾಮಲಕ, ಲಕ್ಷ್ಮಣ ಸೂರಿ, ಧನುಷ್ಕಯಜ್ವಾ, ಮಾಧವಭಟ್ಟ, ಆತ್ಮಾನಂದ, ರಾವಣ, ಮುದ್ಗಲ ಪಂಡಿತ, ದಯಾನಂದ ಸರಸ್ವತೀ, ಮಹೀಧರ, ಸಾಯಣಾಚಾರ್ಯ, ವೇಂಕಟಮಾಧವ, ಅರವಿಂದರ ಶಿಷ್ಯರಾದ ಶ್ರೀ ಕಪಾಲಿ ಶಾಸ್ತ್ರಿಗಳು—ಇತ್ಯಾದಿ ಪಂಡಿತರು ವೇದವ್ಯಾಖ್ಯಾನವನ್ನು ಮಾಡುವ ಪ್ರಯತ್ನ ಮಾಡಿದ್ದಾರೆ. ಆದರೆ ಅವರವರ ಭಾಷ್ಯಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿದಾಗ, ಅವರು ನೀಡಿದ ಅರ್ಥವಿವರಣೆಯು ಅಲೌಕಿಕವಾದ ಪುರುಷಾರ್ಥ ಸಂಪಾದನೆಗೆ ಸಾಧಕವಾಗಿರುವುದಿಲ್ಲವೆಂದು ಅರಿವಾಗುವುದು.

ಈ ದಿಶೆಯಲ್ಲಿ ಭಾರತೀಯ ವೈದಿಕ ಸಾಹಿತ್ಯ ಚರಿತ್ರೆಯನ್ನು ಪರಿಶೀಲಿಸಿದಾಗ, ದ್ವೈತ ಸಿದ್ಧಾಂತೋತ್ತೇಜಕರಾದ ಶ್ರೀ ಮಧ್ವಾಚಾರ್ಯರ ಋಗ್ವೇದ ವ್ಯಾಖ್ಯಾನವು ನಮ್ಮ ಗಮನಕ್ಕೆ ಬರದೇ ಇರುವುದಿಲ್ಲ. ವಾಸ್ತವಿಕವಾದ ವಿಷಯದ ಜಿಜ್ಞಾಸುಗಳಿಗೆ ಇತಿಹಾಸದಿಂದ ಒಂದು ವಿಚಾರವು ಮಾತ್ರ ಸ್ಪಷ್ಟವಾಗುತ್ತದೆ : ಆಚಾರ್ಯ ಮಧ್ವರ ವೇದವ್ಯಾಖ್ಯಾನದ ಪೂರ್ವ ಮತ್ತು ಉತ್ತರ ಕಾಲದಲ್ಲಿ ಪ್ರಚಲಿತವಿದ್ದ ವೇದವ್ಯಾಖ್ಯಾನಗಳನ್ನು ಅಭ್ಯಸಿಸಿದಾಗ ಅಲ್ಲಲ್ಲಿ ಸಾಮರಸ್ಯವಿಲ್ಲದ ಮತ್ತು ಭೌತಿಕವಾದ ಅರ್ಥಗಳು ಕಂಡು ಬರುತ್ತವೆ. ಯಜ್ಞಯಾಗಾದಿಗಳ ವರ್ಣನೆಯನ್ನು ಕೊಡುತ್ತ ಕರ್ಮಕಾಂಡದ ಪ್ರಾಮುಖ್ಯತೆಯನ್ನು ಎತ್ತಿ ತೋರಿಸಲಾಗಿದೆ. ವಾಸ್ತವಿಕವಾಗಿ ವೈದಿಕ ಸಾಹಿತ್ಯ ಸಮಸ್ತವೂ ಪರಮ

ತತ್ತ್ವವನ್ನು ತಿಳಿಸುವ ತಾತ್ಪರ್ಯವುಳ್ಳದ್ದಾಗಿರುವದು. ಆದರೆ ವೇದಭಾಷ್ಯಕಾರರಾದ ಸ್ಕಂದಸ್ವಾಮಿ, ಸಾಯಣಾದಿಗಳಿಂದಲೇ ವೇದಸಾಹಿತ್ಯದಲ್ಲಿ ಕರ್ಮಕಾಂಡ—ಜ್ಞಾನಕಾಂಡ ಎಂದು ಎರಡು ಭಾಗಗಳು ಪ್ರಸಿದ್ಧಿಗೆ ಬಂದವು. ಆದರೆ ಈ ಪ್ರಸಿದ್ಧಿಯು ವೇದದ ಪರಮೋಚ್ಚವಾದ ಉದ್ದೇಶವನ್ನು ಲೋಪ-ಗೊಳಿಸಿದಂತಾಗಿದೆ. ಏಕೆಂದರೆ ಸರ್ವೇ ವೇದಾ ಯತ್ಪದಮಾಮನಂತಿ, ತದ್ವಿಷ್ಣೋಃ ಪರಮಂ ಪದಮ್ (ಕಠ. ಉ. ), ವೇದೈಶ್ಚ ಸರ್ವೈರಹಮೇವ (ಗೀತಾ, ), ಯೋ ದೇವಾನಾಂ ನಾಮಧಾ ಏಕ ಏವ (ಋ. ) ಇತ್ಯಾದಿ ಪ್ರಮಾಣ ವಚನಗಳಿಂದ, ಸಕಲ ವೇದಗಳು ಆಪಾತತಃ ಕರ್ಮಪ್ರತಿಪಾದಕವೆಂದು ತೋರಿದರೂ, ಪರಮಾತ್ಮ ತತ್ತ್ವ ಪ್ರತಿಪಾದಕಗಳೆಂದು ಅಭಿವ್ಯಕ್ತವಾಗುವದು. ಇದರಿಂದ ಸಮಸ್ತ ವೇದವು ಜ್ಞಾನಕಾಂಡವೇ ಎಂದು ಸಿದ್ಧವಾಗುವದು. ಈ ವಿಚಾರವನ್ನೇ ಜಯತೀರ್ಥರು ಹೀಗೆ ಪ್ರಥಿತಗೊಳಿಸಿದ್ದಾರೆ. ಜನನ ಮರಣ ರೂಪವಾದ ಸಂಸಾರ ಬಂಧನದಿಂದ ಮುಕ್ತವಾಗಬೇಕಾದರೆ ಪರಮಾತ್ಮನ ಪರಮಾನುಗ್ರಹವು ಅತ್ಯವಶ್ಯಕವಾದುದು. ಇಂತಹ ಅನುಗ್ರಹವು ಮಾತ್ರ ಪರಬ್ರಹ್ಮನ ಯಥಾರ್ಥ ಜ್ಞಾನದಿಂದಲೇ ಸಂಭವಿಸತಕ್ಕದಾಗಿದೆ. ಮತ್ತು ಈ ಯಥಾರ್ಥ ಜ್ಞಾನವು ವೇದಾರ್ಥದ ಸಮ್ಯಕ್ ಪರಿಜ್ಞಾನದಿಂದ ಉಂಟಾಗುವದು. ಆದರೆ ಅಸಂಬದ್ಧ ವೇದವ್ಯಾಖ್ಯಾನಗಳಿಂದ ವೇದದ ನಿಜವಾದ ತಿರುಳು ತಿರೋಹಿತವಾಯಿತು. ಈ ತಿರೋಧಾನವನ್ನು ಆಮೂಲಾಗ್ರವಾಗಿ ನಿರ್ಮೂಲನಗೊಳಿಸಲು, ವೇದದ ನಿಜವಾದ ವಿದ್ಯೆಯನ್ನು ಪ್ರಕಾಶಗೊಳಿಸಲು ಮತ್ತು ಪರಮಾತ್ಮನ ಸರ್ವೋತ್ತ-ಮತ್ವವನ್ನು ಘೋಷಿಸುವುದೇ ವೇದಗಳಿಗೆ ಮುಖ್ಯ ತಾತ್ಪರ್ಯವಿದೆಯೆಂದು ತೋರಿಸಲು ಆಚಾರ್ಯ ಮಧ್ವರ ವೇದಭಾಷ್ಯವು ಪ್ರವೃತ್ತವಾಯಿತು. ಇದರಿಂದ ಸಮಸ್ತ ವೇದವು ಪರಮ ಮುಖ್ಯ ವೃತ್ತಿಯಿಂದ ಜ್ಞಾನಕಾಂಡವೇ ಆಗಿದೆಯೆಂದು ಸುಸ್ಪಷ್ಟವಾಗುತ್ತದೆ. (**ಇಹ ಖಲು ಸಂಸಾರಾಕೂಪಾರಪಾರಂ ಜಿಗಮಿಷತಾಂ ಪ್ರಾರ್ಥನೀಯಸ್ಯ ಭಗವತ್ ಪ್ರಸಾದಸ್ಯ ತದ್‌ಜ್ಞಾನಮಂತರೇಣಾಸಂಭವಾತ್ತದರ್ಥಂ ಪ್ರವೃತ್ತಾ ಅಪಿ ವೇದಾ ಅಪ್ರತಿಪತ್ತಿಭ್ಯಾಮ್ ನ ತತ್ಕರಣತಾಮಶ್ನುವತೇ, ಅತ ಃ ತೇಷಾಂ ಭಗವತಪರತ್ವ ಪ್ರಕಾಶ ಪ್ರದರ್ಶನಾರ್ಥಂ ಕಾಸಾಂಚಿದೃಚಾಂ ಭಾಷ್ಯಂ ಕರಿಷ್ಯನ್......**)

ವೇದ ಮಂತ್ರಗಳಲ್ಲಿ ಬಹುಶಃ ಇಂದ್ರ, ವರುಣ, ಅಗ್ನ್ಯಾದಿ ದೇವತೆಗಳನ್ನು ಕುರಿತು ಪ್ರಾರ್ಥನೆ ಮಾಡಿರುವದು ಕಂಡು ಬರುತ್ತದೆ. ಮಳೆ, ಗಾಳಿ, ಬೆಳಕುಗಳನ್ನು ಕುರಿತು ಕ್ಷುದ್ರ ಅಪೇಕ್ಷೆಗಳನ್ನು ಋಷಿಗಳು ಪ್ರಾರ್ಥಿಸಿದ್ದು ಆಪಾತತ; ಕಂಡು ಬರುತ್ತದೆ. ಪರಬ್ರಹ್ಮ ಪ್ರತಿಪಾದಕಗಳಾದ ವೇದಗಳ ಅರ್ಥ ವೈಶಾಲ್ಯವು ಇಷ್ಟಕ್ಕೆ ಸೀಮಿತಗೊಳಿಸಿದರೆ ವೇದಗಳಿಗೆ ಅಪಚಾರವೆಸಗಿದಂತಾಗುವದಿಲ್ಲವೇ ! ಆದುದರಿಂದ, ಆಚಾರ್ಯ ಮಧ್ವರು ಋಗ್ಭಾಷ್ಯದಲ್ಲಿ, ವೇದ ಮಂತ್ರಗಳಿಗೆಲ್ಲ ಆದಿಭೌತಿಕ, ಆಧಿದೈವಿಕ ಮತ್ತು ಆಧ್ಯಾತ್ಮಿಕ ಎಂದು ಮೂರು ವಿಧವಾದ ಅರ್ಥಗಳನ್ನು ತೋರಿಸಿದ್ದಾರೆ. "ತ್ರ್ಯರ್ಥತಾಂ ಶ್ರುತಿಷು ವಿತ್ತ" ಎಂದು ಮಧ್ವರ ನಿಖರವಾದ ಉಪದೇಶ. (**ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ, ವಿಷ್ಣೋಃ ಸಹಸ್ರನಾಮಾಪಿ ನಿರಂತರ ಶತಾರ್ಥಕಮ್॥ ಸ್ಕಾಂದಪುರಾಣ**). ಆಚಾರ್ಯ ಮಧ್ವರ ದ್ವೈತಸಿದ್ಧಾಂತವನ್ನು ಒಪ್ಪುವವನಿರಲಿ ಅಥವಾ ಒಪ್ಪದಿರಲಿ, ಈ ಐತಿಹಾಸಿಕ ಸತ್ಯವನ್ನು ಮಾತ್ರ ಅಲ್ಲಗಳೆಯುವುದು ಸಾಧ್ಯವಿಲ್ಲ. ಮಧ್ವರ ನಂತರ ಈ ದಿಶೆಯಲ್ಲಿ ಪ್ರಯತ್ನಿಸಿದವರೆಂದರೆ ದಯಾನಂದ ಸರಸ್ವತಿ ಮತ್ತು ಅರವಿಂದರ ಶಿಷ್ಯರಾದ ಶ್ರೀ ಕಪಾಲಿ ಶಾಸ್ತ್ರಿಗಳು. ಅವರು ಏನೇ ಹೇಳಿದ್ದರೂ ವೇದಕ್ಕಿರುವ ಆಧ್ಯಾತ್ಮಿಕ ಮುಖವನ್ನು ಕಂಡು ಹಿಡಿದ ಧವಲ ಕೀರ್ತಿಯು ಪ್ರಥಮತ: ಆಚಾರ್ಯ ಮಧ್ವರಿಗೇ ಮೀಸಲು.

ಶ್ರೀ ಮಧ್ವರು ಋಗ್ವೇದದ ನಲವತ್ತು ಸೂಕ್ತಗಳಿಗೆ ಮಾತ್ರ ಭಾಷ್ಯವನ್ನು ಬರೆದರೂ ಆ ಭಾಷ್ಯ ಭಾತಿಯಲ್ಲಿ ಸಮಸ್ತ ವೇದಮಂತ್ರಗಳ ಆಧ್ಯಾತ್ಮಿಕ ಸತ್ವವನ್ನು ಕಂಡುಕೊಳ್ಳುವಷ್ಟು ಅವರ ವ್ಯಾಖ್ಯಾನ

ಶೈಲಿಯು ವೈವಿಧ್ಯಮಯವಾಗಿದೆ. ಆಚಾರ್ಯರ ವೇದಭಾಷ್ಯವನ್ನು ಕೂಲಂಕಷವಾಗಿ ಅಧ್ಯಯನ ಮಾಡಿದಾಗ ವೇದಮಂತ್ರಗಳ ಅರ್ಥಗಾಂಭೀರ್ಯವು ಅಭಿವ್ಯಂಜಿತವಾಗುವದು. ಈ ವಿಚಾರವನ್ನು ಸ್ಪಷ್ಟಪಡಿಸಲು ಆಯ್ದ ಒಂದೆರಡು ಮಂತ್ರಗಳ ವಿವರಣೆಯನ್ನು ಈ ಕೆಳಗಿನಂತೆ ಪರಿಶೀಲಿಸಬಹುದು :—

**ಅಗ್ನಿಮಿಳೇ ಪುರೋಹಿತಂ**
**ಯಜ್ಞಸ್ಯ ದೇವಮೃತ್ವಿಜಮ್**
**ಹೋತಾರಂ ರತ್ನಧಾತಮಮ್ (೧.೧.೧.)**

ಈ ಮಂತ್ರದ ಪ್ರಚಲಿತವಾದ ಅರ್ಥವು ಹೀಗಿದೆ : "ಯಜ್ಞದಲ್ಲಿ ಅಗ್ರ ಸ್ಥಾನದಲ್ಲಿದ್ದುಕೊಂಡು ಪುರೋಹಿತನಾಗಿಯೂ, ಯಜ್ಞದಲ್ಲಿ ಪ್ರತ್ಯಕ್ಷ ದೇವತಾ ರೂಪದಿಂದ ಇರುವವನಾಗಿಯೂ, ಯಜ್ಞದಲ್ಲಿ ಮುಖ್ಯ ಭಾಗವಹಿಸುವ ಬ್ರಹ್ಮ, ಹೋತೃ, ಅಧ್ವರ್ಯು, ಉದ್ಗಾತೃ ಎಂಬ ನಾಲ್ಕು ಜನ ಮುಖ್ಯ ಋತ್ವಿಜರಲ್ಲಿ ಹೋತೃವೆಂಬ ಋತ್ವಿಜನಾಗಿಯೂ, ಯಜ್ಞ ಮಾಡುವ ಯಜಮಾನನಿಗೆ ರತ್ನಾದಿ ಸಂಪತ್ತನ್ನು ಅನುಗ್ರಹಿಸುವವನಾಗಿಯೂ ಇರುವ ಅಗ್ನಿಯೆಂಬ ದೇವತೆಯನ್ನು ಸ್ತುತಿಸುವೆನು "

ಈ ರೀತಿಯಾಗಿ ಆಯಾ ಮಂತ್ರಗಳನ್ನು ಅಗ್ನ್ಯಾದಿ ದೇವತಾ ಪರವಾಗಿ ಸಾಯಣಾಚಾರ್ಯ ಮತ್ತಿನ್ನಿತರ ಭಾಷ್ಯಕಾರರು ಅರ್ಥೈಸಿದ್ದಾರೆ. ಇಷ್ಟು ಅರ್ಥಮಾತ್ರದಿಂದ ಯಾವ ಅಭ್ಯಾಸಿಯೂ ಮಂತ್ರದ ತಾತ್ತ್ವಿಕ ವೈಶಿಷ್ಟ್ಯವನ್ನು ತಿಳಿಯಲು ಸಾಧ್ಯವಿಲ್ಲ. ಅಲ್ಲದೆ ಇದರಿಂದ ವೇದಮಂತ್ರಗಳ ಮೂಲವಾದ ಪವಿತ್ರ ತತ್ತ್ವವು ಆಭಾಸವಾಗುವದು. ಆದರೆ ಆಚಾರ್ಯ ಮಧ್ವರ ವ್ಯಾಖ್ಯಾನವನ್ನು ಅವಲೋಕಿಸಿದಾಗ ಈ ಮೇಲಿನ ಮಂತ್ರಕ್ಕೆ
೧) ಅಗ್ನಿದೇವತಾಪರವಾಗಿಯೂ, ೨) ತದಂತರ್ಗತ ವಿಷ್ಣುಪರವಾಗಿಯೂ ಮತ್ತು
೩) ಅಧ್ಯಾತ್ಮಪರವಾಗಿಯೂ ಅರ್ಥವನ್ನು ಹೇಳಿರುವುದು ಕಂಡು ಬರುತ್ತದೆ.

ಆಧಿಭೌತಿಕ ಪಥದಲ್ಲಿ ಅಗ್ನಿದೇವತೆಯನ್ನು ಹಿತಕರನೆಂದೂ, ಯಜ್ಞದೇವತೆಯೆಂದೂ ಹೋತೃವಿನ ಯಜ್ಞದೇವತೆಯೆಂದೂ, ಯಜ್ಞವನ್ನು ಮಾಡುವವರಿಗೆ ಸುಖವನ್ನು ಕೊಡುವವನು ಎಂದೂ ವರ್ಣಿಸಲಾಗಿದೆ.

ಆಧಿದೈವಿಕಪರವಾಗಿ, ಅಗ್ನಿ ಶಬ್ದವನ್ನು ಸರ್ವೋತ್ತಮನಾದ ವಿಷ್ಣುದೇವತಾವಾಚ್ಯವೆಂದು ವ್ಯಾಖ್ಯಾನಿಸಲಾಗಿದೆ : ವಿಷ್ಣುವು ಸರ್ವರಿಗಿಂತಲೂ ಪ್ರಥಮದಲ್ಲಿರುವದರಿಂದ ಸರ್ವೋತ್ತಮನಾದುದರಿಂದ, ಸಂಹಾರಕರ್ತೃವಾದುದರಿಂದ, ಅಗ್ನಿಯಲ್ಲಿ ಅರ್ಪಿಸಿದ ಹವಿಸ್ಸುಗಳನ್ನು ಸ್ವೀಕಾರ ಮಾಡುವದರಿಂದ ಮತ್ತು ಅಗ್ನಿದೇವತೆಯಲ್ಲಿ ಅಂತರ್ಗತನಾಗಿದ್ದು ಅವನನ್ನು ನಿಯಮಿಸುವದರಿಂದ ವಿಷ್ಣುವು ಅಗ್ನಿಶಬ್ದವಾಚ್ಯನಾಗಿದ್ದಾನೆ. (**ಅಗ್ನಿಶಬ್ದೋಽಯಮಗ್ರ್ಯ ಏವಾಭಿಪೂಜ್ಯತಾಂ, ಅಗ್ರ್ಯತ್ವಮಗ್ರನೇತೃತ್ವಮತ್ತಿ (ತ್ತ್ರ)ಮಂಗಾಗನೇತೃತಾಮ್**). ಪುರೋಹಿತಂ ಎಂಬ ಶಬ್ದಕ್ಕೆ "ಯಜ್ಞಾನುಷ್ಠಾನ ಕಾಲದಲ್ಲಿ ಎಲ್ಲರಿಗಿಂತಲೂ ಮೊದಲು ಕುಳಿತು ಯಜ್ಞದ ಕಾರ್ಯಕಲಾಪಗಳನ್ನು ಮಾಡುವವನು" ಎಂದೂ. **ಋತ್ವಿಜಂ** ಶಬ್ದಕ್ಕೆ "ನಿರ್ದಿಷ್ಟವಾದ ಕಾಲದಲ್ಲಿ ಹೋಮ ಮಾಡುವವನು" ಎಂದೂ, **ರತ್ನಧಾತಮಂ** ಶಬ್ದಕ್ಕೆ "ಯಜ್ಞದ ಫಲರೂಪವಾಗಿ ಯಜಮಾನನಿಗೆ ರತ್ನಾದಿ ಶ್ರೇಷ್ಠ ವಸ್ತುಗಳನ್ನು ಕೊಡುವವನು" ಎಂದು ಸಾಯಣರು ಅರ್ಥ ಮಾಡಿದ್ದಾರೆ. ಆದರೆ ಆಚಾರ್ಯ ಮಧ್ವರ ಪ್ರಕಾರ, ಶ್ರೀಹರಿಯು ಅಖಿಲ ಜಗತ್ತಿಗೆ ಅನಾದಿಕಾಲದಿಂದ ಹಿತಕರನಾದ್ದರಿಂದ **ಪುರೋಹಿತ** ಶಬ್ದವಾಚ್ಯನಾಗಿಯೂ [**ಅಶೇಷಸ್ಯ ಪೂರ್ವಮೇವ ಹಿತಂ ಪ್ರಭುಂ**), ಸರ್ವದಾ ಋತ್ವಿಜರಲ್ಲಿ ನಿಯಾಮಕನಾಗಿದ್ದು ಅವರ **ಕಾರ್ಯಪ್ರವರ್ತಕ-**

ನಾಗಿರುವವರಿಂದ ಋತ್ವಿಕ್ ಶಬ್ದವಾಚ್ಯನೂ (ಋತ್ವಿಕ್-ನಿಯಾಮಕತ್ವೇನ ಯಜ್ಞಾನಾಂ ಋತ್ವಿಜಂ ಸದಾ.) ಪ್ರಕಾಶ, ವಿಜಯ, ಕಾಂತಿ, ವ್ಯವಹಾರ, ಗತಿ, ರಮಣ, ಮದ, ಸ್ವಪ್ನ ಇವುಗಳಿಗೆ ಕರ್ತೃವಾದುದ ರಿಂದ ಮತ್ತು ಸ್ತೋತ್ರಕ್ಕೆ ವಿಷಯನಾದುದರಿಂದ ದೇವ ಶಬ್ದವಾಚ್ಯನಾಗಿಯೂ (ದ್ಯೋತನಾದ್ವಿಜಯಾತ್ಕಾಂತ್ಯಾ ಸ್ತುತ್ಯಾ ವ್ಯವಹೃತೇರಪಿ, ಗತ್ಯಾ ರತ್ಯಾಚ ದೇವಾಖ್ಯಂ), ಹೋತೃವಿನಲ್ಲಿದ್ದು ಅವನಿಗೆ ನಿಯಾಮಕ ನಾಗಿದ್ದರಿಂದ ಹೋತೃ ಶಬ್ದವಾಚ್ಯನೂ ಮತ್ತು ತಾನು ಸುಖಸ್ವರೂಪಿಯಾಗಿದ್ದು ಭಕ್ತರಿಗೆ ಸಂಖವನ್ನು ಕೊಡುವದರಿಂದ ರತ್ನಧಾತಮ ಶಬ್ದವಾಚ್ಯನೂ ಎಂದು ಪರಮಾತ್ಮನ ಸರ್ವೋತ್ತಮತ್ವವನ್ನು ನಿರೂಪಿಸಲಾಗಿದೆ.

ಇನ್ನು ಆಧ್ಯಾತ್ಮ ಪಕ್ಷದಲ್ಲಿ— ಆಪ್ತಕಾಮನಾದ ಪರಮಾತ್ಮನು ಜೀವಶರೀರದ ಅಂತರ್ಗತನಾಗಿದ್ದು ಸಕಲ ವಿಷಯಗಳ ಭೋಕ್ತೃವಾಗಿರುವದರಿಂದ ಮತ್ತು ಶರೀರದ ಕಾರ್ಯಕಲಾಪಗಳಿಗೆ ಪ್ರವರ್ತಕನಾಗಿರುವ ದರಿಂದ ಶ್ರೀಹರಿಯು ಅಗ್ನಿ ಶಬ್ದವಾಚ್ಯನಾಗಿದ್ದಾನೆ. ಬಾಹ್ಯ ಯಜ್ಞಗಳಿಗೆ ಅಧ್ಯಾತ್ಮಿಕರಾದ ಋತ್ವಿಕ್ ಎನಿಸಿದ ಇಂದ್ರಿಯಾಭಿಮಾನಿ ದೇವತೆಗಳಿಗೂ, ಜ್ಞಾನರೂಪ ಆಧ್ಯಾತ್ಮಿಕ ಯಜ್ಞಗಳಿಗೆ ನಿಯಾಮಕ‌ನಾಗಿರುವವರಿಂದ ಋತ್ವಿಕ್ ಶಬ್ದವಾಚ್ಯನಾಗಿದ್ದಾನೆ. ಋತ್ವಿಜರ ಮಂತ್ರೋಚ್ಚಾರಣೆಗೆ ಕಾರಣನಾಗಿರ ವದರಿಂದ ಮತ್ತು ಹೋತೃವಿನಲ್ಲಿದ್ದು ಸ್ತುತ್ಯನಾಗಿರುವದರಿಂದ ಮತ್ತು ಇಂದ್ರಿಯಾಖ್ಯ ಅಗ್ನಿಗಳಲ್ಲಿ ಆಯಾ ಇಂದ್ರಿಯಗಳಿಗೆ ವಿಷಯಗಳಾದ ಹವಿಸ್ಸುಗಳನ್ನು ಶ್ರೀ ಹರಿಯು ಹೋಮಿಸುವದರಿಂದ ಹೋತೃ ಶಬ್ದವಾಚ್ಯನಾಗಿದ್ದಾನೆ. ಹಾಗೆಯೇ ಇಂದ್ರಿಯ ವಿಷಯ ಸಂಬಂಧ ಸಂಪಾದನಾ ದ್ವಾರಾ ವಿಷಯಾನುಭವ ರೂಪವಾದ ಸುಖವನ್ನು ಪರಮಾತ್ಮನು ಕೊಡುವದರಿಂದ ರತ್ನಧಾತಮ ಶಬ್ದವಾಚ್ಯನಾಗಿದ್ದಾನೆಂದು ವ್ಯಾಖ್ಯಾನಿಸಲಾಗಿದೆ. ಈ ರೀತಿಯಾಗಿ ಮಂತ್ರಕ್ಕೆ ಮೂರು ವಿಧವಾದ ಅರ್ಥವೈಶಿಷ್ಟ್ಯವನ್ನು ಆಚಾರ್ಯ ಮಧ್ವರ ಭಾಷ್ಯದ ಪ್ರತಿಯೊಂದು ಹಂತದಲ್ಲಿಯೂ ಪರಿಶೀಲಿಸಬಹುದು.

ವಾಯವಾ ಯಾಹಿ ದರ್ಶತೇಮೇ
ಸೋಮಾ ಅರಂಕೃತಾಃ
ತೇಷಾಂ ಪಾಹಿ ಶ್ರುಧಿ ಹವಮ್ (ಋ. ೧.೨.೧.)

ಈ ಮಂತ್ರಕ್ಕೆ ಸಾಯಣರ ಭಾಷ್ಯಕ್ಕನುಸಾರವಾಗಿ ಪ್ರಚಲಿತವಾದ ಅರ್ಥವು ಹೀಗಿದೆ. "ಎಲೈ ವಾಯುವೇ, ನಿನ್ನ ಆಕಾರವು ಸುಂದರವಾಗಿರುವದು. ಈ ಯಜ್ಞದಲ್ಲಿ ಸೋಮರಸವನ್ನು ವಿಧ್ಯುಕ್ತವಾಗಿ ಹಿಂಡಿ ತೆಗೆದು ಸಿಂಗರಿಸಿ ಸಿದ್ಧಪಡಿಸಿರುವೆವು. ನಮ್ಮ ಆಹ್ವಾನವನ್ನು ಕೇಳಿ ಇಲ್ಲಿಗೆ ಬಂದು ಸೋಮರಸವನ್ನು ಪಾನಮಾಡು."

ಸೋಮಯಾಜಿಗಳಿಗೆ ಈ ಮೇಲಿನ ಅರ್ಥವು ಹೆಚ್ಚು ಅನ್ವಯವಾಗುವಂತಿದ್ದರೂ ವೇದಮಂತ್ರದ ಪವಿತ್ರವಾದ ಸಂದೇಶವು ಅಷ್ಟಕ್ಕೆ ಮಾತ್ರ ಸೀಮಿತವಾಗಿರುವದಿಲ್ಲ. ಮಧ್ವರ ವ್ಯಾಖ್ಯಾನವನ್ನು ಅವಲೋಕಿಸಿದಾಗ ಈ ಮಂತ್ರಕ್ಕಿರುವ ಅರ್ಥವಿಶಾಲತೆಯ ಅರಿವಾಗುವದು.

ಆಧಿಭೌತಿಕ ಪರವಾಗಿ ಹೀಗೆ ಅರ್ಥೈಸಬೇಕು. "ಓ ಬೀಸುವ ಗಾಳಿಗೆ ಅಭಿಮಾನಿಯಾದ ವಾಯು ದೇವತೆಯೇ, ಜ್ಞಾನಪೂರ್ಣನೇ, ನಮ್ಮ ಯಜ್ಞಸ್ಥಳಕ್ಕೆ ಆಗಮಿಸುವವನಾಗು. ನಿನಗಾಗಿ ಅಲಂಕರಿಸಿದ

ಸೋಮರಸವನ್ನು ಸಿದ್ಧಮಾಡಲಾಗಿದೆ. ನಮ್ಮ ಪ್ರಾರ್ಥನೆಯನ್ನು ಕೇಳಿ ಬಂದು ಈ ಸೋಮರಸವನ್ನು ಪಾನಮಾಡು."

ಆಧಿದೈವಿಕ ರೀತಿಯಲ್ಲಿ ಹೀಗೆ ತಿಳಿಯಬಹುದು. "ವಾಯುದೇವನಲ್ಲಿ ಅಂತರ್ಗತನಾಗಿದ್ದು ಅವನ ಕಾರ್ಯಕಲಾಪಗಳನ್ನು ನಿಯಮನ ಮಾಡುವ ಶ್ರೀ ಹರಿಯೇ, ನಮ್ಮ ಯಜ್ಞ ವ್ಯಾಪಾರಗಳನ್ನು ಸಫಲಗೊಳಿಸು."

ಆಧ್ಯಾತ್ಮಿಕ ಪರವಾಗಿ ಹೀಗೆ ಮಂತ್ರವನ್ನು ಪರಿಶೀಲಿಸಬಹುದು. "ಬಲರೂಪನೂ ಸರ್ವಾಶ್ರಯನೂ ಆದ ವಾಯುನಾಮಕ ಪರಮಾತ್ಮನೇ, ನಮ್ಮ ಆಧ್ಯಾತ್ಮ ಯಜ್ಞಕ್ಕೆ ಸನ್ನಿಹಿತನಾಗು. ಮನೋ ವ್ಯಾಪಾರಗಳು (ಸೋಮಾಃ) ಆಧ್ಯಾತ್ಮ ಯಜ್ಞದಲ್ಲಿ ಭಕ್ತ್ಯಾದಿಗಳಿಂದ ಅಲಂಕೃತವಾಗಿವೆ. ಕಾರಣ ಈ ಮನೋವ್ಯಾಪಾರಗಳನ್ನು ಸೇವಿಸು—ಅಂದರೆ ಪ್ರೀತಿಯುಕ್ತಗಳನ್ನಾಗಿ ಮಾಡು. ನಿನ್ನ ಅಪ್ರಾಕೃತ ವಾದ ದೇಹೇಂದ್ರಿಯಗಳಿಂದ ಈ ಸಾರವನ್ನು ಭೋಗಿಸು."

ಇಲ್ಲಿ ವಾಯು ಶಬ್ದವು ಪರಮಾತ್ಮನ ಬಲಾತ್ಮಕತ್ವವನ್ನೂ ಸರ್ವಾಶ್ರಯತ್ವವನ್ನೂ ಹೇಳುತ್ತದೆ. (ಬಲತ್ವಾದಯನಾಚ್ಚೈವ ವಾಯುರಿತ್ಯಭಿಧೀಯತೇ). ಮತ್ತು ದರ್ಶತ ಶಬ್ದವು ಪರಮಾತ್ಮನ ಸಾರ್ವಜ್ಞ ವನ್ನು (ದರ್ಶತಸ್ತತದೃಷ್ಟಿತ್ವಾತ್ ಸರ್ವಜ್ಞೋऽಸೌ ಯತೋ ವಿಭುಃ) ಮತ್ತು ಸರ್ವವ್ಯಾಪ್ತಿಯನ್ನೂ ಹೇಳುತ್ತದೆ. ಇಂತಹ ಪರಮಾತ್ಮನನ್ನೇ ವಾಯು ಎಂದು ಸ್ತುತಿಸಲಾಗಿದೆ. ಎಲ್ಲ ಕಡೆಗೂ ಇದ್ದು ಎಲ್ಲರಿಗೂ ಜೀವನ ಪ್ರದಾನ ಮಾಡುವವನು ವಾಯು. ಪರಮಾತ್ಮನು ಸರ್ವಜ್ಞನಾದುದರಿಂದ, ಎಲ್ಲರಿಗೂ ಸ್ವೀಕಾರ್ಯನಾದುದರಿಂದ, ಆಶ್ರಯನಾದುದರಿಂದ ವಾಯುವೆನಿಸುವನು. ಅವನು ಸಂಸಾರ ಬಂಧಕನೂ ಮೋಚಕನೂ ಆಗಿರುವದರಿಂದ ವಾಯು. ಎಲ್ಲವೂ ಪ್ರಳಯಕಾಲದಲ್ಲಿ ಯಾರಲ್ಲಿ ಲೀನವಾಗುವದೋ ಅಂತಹವನು ವಾಯು. ಇಂತಹ ಮಹಿಮಾವಿಶಿಷ್ಟನಾದ ವಾಯು ಶಬ್ದವಾಚ್ಯನಾದ ಶ್ರೀ ಹರಿಯನ್ನು ಭಕ್ತನು "ನನ್ನ ಹೃದಯದಲ್ಲಿ ವಾಸಿಸು ಬಾ, ನನ್ನನ್ನು ಜಾಗೃತಗೊಳಿಸು" ಎಂದು ಪ್ರಾರ್ಥಿಸುತ್ತಾನೆ.

ಒಟ್ಟಿನಲ್ಲಿ ಹೇಳುವುದಾದರೆ ನಮ್ಮ ಜೀವನವೇ ಪರಮಾತ್ಮನ ಪೂಜಾಮಯವಾದ ಒಂದು ಯಜ್ಞ. ಜ್ಞಾನ– ಭಕ್ತಿ– ವೈರಾಗ್ಯ, ಇವುಗಳಿಂದ ಅಲಂಕೃತವಾದ ಭಕ್ತನ ಮನಸ್ಸೇ ಹಿರಣ್ಯದಿಂದ ಅಲಂಕೃತ ವಾದ ಸೋಮರಸ. ನಮ್ಮ ಹೃದಯವೇ ಪರಮಾತ್ಮನ ಮಂದಿರ. ಈ ಆಧ್ಯಾತ್ಮಿಕ ಅರ್ಥವನ್ನಿಟ್ಟು ಕೊಂಡು ಭಕ್ತನು– "ನನ್ನ ಮನಸ್ಸನ್ನು ಪಾನ ಮಾಡು–ಪ್ರೀತಿಯಿಂದ ಸ್ವೀಕರಿಸು–ಅಂದರೆ ನನ್ನ ಮನೋವ್ಯಾಪಾರಗಳಿಗೆ ಯಾವಾಗಲೂ ನಿನ್ನ ರಕ್ಷಣೆಯು ಇರಲಿ–ನನ್ನ ಮನಸ್ಸು ದುರ್ಮಾರ್ಗದಲ್ಲಿ ಪ್ರವೃತ್ತವಾಗದಿರಲಿ" ಎಂದು ಪರಮಾತ್ಮನನ್ನು ಏಕಚಿತ್ತದಿಂದ ಪ್ರಾರ್ಥಿಸುತ್ತಾನೆ. ಹೀಗೆ ಮಧ್ವರು ಈ ಮಂತ್ರಕ್ಕೆ ನೀಡಿದ ಆಧ್ಯಾತ್ಮಿಕ ಅರ್ಥಕ್ಕೂ ಪ್ರಚಲಿತವಾದ ಅರ್ಥಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಿದಾಗ ಶ್ರೀ ಮಧ್ವರ ಭಾಷ್ಯ ವೈಶಿಷ್ಟ್ಯವು ಸ್ಫುರಣವಾಗುವದು.

ಅಥಾ ತೇ ಅಂತಮಾನಾಂ<br>
ವಿದ್ಯಾಮ ಸುಮತೀನಾಮ್<br>
ಮಾ ನೋ ಅತಿಖ್ಯ ಆ ಗಹಿ ॥ (ಋ. ೧. ೪. ३).

ಆಧಿಭೌತಿಕ ದೃಷ್ಟಿಯಲ್ಲಿ ಈ ಮಂತ್ರವು ಇಂದ್ರನನ್ನು ಕುರಿತಾದ ಪ್ರಾರ್ಥನಾರೂಪವಾಗಿದೆ. ಆಧಿದೈವಿಕ ದೃಷ್ಟಿಯಲ್ಲಿ, ಇಂದ್ರನ ಅಂತರ್ಗತವಾದ ಮತ್ತು ನಿಯಾಮಕನಾದ ಪರಮಾತ್ಮನ ಸ್ತೋತ್ರ ವಾಗಿದೆ. ಇನ್ನು ಆಧ್ಯಾತ್ಮ ದೃಷ್ಟಿಯಲ್ಲಿ ಈ ಮಂತ್ರದ ಅರ್ಥವನ್ನು ಈ ಕೆಳಗಿನಂತೆ ತಿಳಿಯಬಹುದು. **ಅಂತಮ** ಎಂದರೆ ಎಲ್ಲಕ್ಕಿಂತ ಎತ್ತರದಲ್ಲಿರುವದು—ಅಂದರೆ ಸರ್ವೋತ್ತಮವಾದುದು. **ಸುಮತಿ** ಎಂದರೆ ಯಥಾರ್ಥವಾದ ಜ್ಞಾನ. ಇಂತಹ ಸರ್ವೋತ್ತಮವಾದ ವಂತಮ್ಮ ಯಥಾರ್ಥ ಜ್ಞಾನವನ್ನು ಭಕ್ತನು ಇಂದ್ರ ಶಬ್ದವಾಚ್ಯನಾದ ಪರಮಾತ್ಮನಿಗೆ ಕೇಳುತ್ತಿದ್ದಾನೆ. ಆಚಾರ್ಯ ಮಧ್ವರು ಇಂದ್ರಶಬ್ದವನ್ನು ವಿವಿಧ ರೀತಿಯಲ್ಲಿ ವಿವರಿಸಿದ್ದಾರೆ. ಭಕ್ತನ ಪ್ರಾರ್ಥನೆಗೆ ಭಕ್ತಾಧೀನನಾದ ಪರಮಾತ್ಮನು ಅವನ ಸನಿಹಕ್ಕೆ ಬರುವವನಾದ್ದರಿಂದ ಅವನು ಇಂದ್ರನು; ಎಲ್ಲ ವಿಷಯಗಳನ್ನು ಸಾಕ್ಷಾತ್ಕರಿಸುವ ಸಾಕ್ಷಿ ಚೇತನವಾದ್ದರಿಂದ, ಭಕ್ತರ ಇಚ್ಛೆಗಳನ್ನು ಪೂರೈಸುವವನಾದ್ದರಿಂದ, ಪ್ರಕಾಶಾತ್ಮಕನಾದ್ದರಿಂದ ಪರಮಾತ್ಮನಿಗೆ ಇಂದ್ರನೆಂಬು ಕರೆಯಲಾಗಿದೆ. ಹೀಗೆ ಇಂದ್ರ ಎಂಬ ಒಂದು ಶಬ್ದದಿಂದ ಪರಬ್ರಹ್ಮನ ಅನೇಕ ಸದ್ಗುಣಗಳು ಅಭಿವ್ಯಕ್ತವಾಗುವವು.

ಇದಲ್ಲದೇ ಈ ಮಂತ್ರಕ್ಕೆ ಇನ್ನೊಂದು ಅರ್ಥವನ್ನು ಮಧ್ವರು ದೊರಕಿಸಿದ್ದಾರೆ—"**ಅಂತಮ** ಎಂದರೆ ಪರಮಾತ್ಮ, **ಸುಮತಿ** ಎಂದರೆ ಪರಮಾತ್ಮನ ನಿತ್ಯಸಾನ್ನಿಧ್ಯವುಳ್ಳ ಜ್ಞಾನಿಗಳು. ಅಂತಹ ಜ್ಞಾನಿಗಳ ಸಹವಾಸದಿಂದ ನಮಗೂ ಸತ್ಯದ ಅಂದರೆ ಪರಮಾತ್ಮನ ಮಹಿಮೆ ತಿಳಿಯುವಂತಾಗಲಿ-ಕಾರಣ ನಿನ್ನ ಕೃಪಾಕಟಾಕ್ಷವು ನಮ್ಮ ಮೇಲೆ ಯಾವಾಗಲೂ ನೆಲಸಲಿ."

ವೇದದ ಗುಹ್ಯಾರ್ಥವನ್ನು ತಿಳಿದುಕೊಳ್ಳಲು ಇಷ್ಟೊಂದು ವ್ಯಾಪಕವಾದ ವ್ಯಾಖ್ಯಾನವನ್ನು ನೀಡಿವವರು ಆಚಾರ್ಯ ಮಧ್ವರು ಮಾತ್ರ ಎನ್ನಬಹುದು. ಹೀಗೆ ಯಾವ ಮಂತ್ರವನ್ನು ಪರಿಶೀಲಿಸಿ ದರೂ ಅದರ ಆಧ್ಯಾತ್ಮಿಕ ರಹಸ್ಯವನ್ನು ಅರಿಯಲು ಮಧ್ವರ ವ್ಯಾಖ್ಯಾನ ಅವಶ್ಯಕವಾದ ಕೈಪಿಡಿ. ಯಾಗಿದೆ. ವೇದಸಾಹಿತ್ಯಕ್ಕೆ ಆಧಿಭೌತಿಕ, ಆಧಿದೈವಿಕ ಮತ್ತು ಆಧ್ಯಾತ್ಮಿಕ—ಈ ರೀತಿಯಾಗಿ ಮೂರು ದೃಷ್ಟಿಕೋನಗಳಲ್ಲಿ ಅರ್ಥ ಪರಂಪರೆಗೆ ನಾಂದಿ ಹಾಕಿದವರು ಆಚಾರ್ಯ ಮಧ್ವರು. ಇಷ್ಟು ಗಹನವಾದ ಅರ್ಥವನ್ನು ಅರಿಯದೇ ವೇದಮಂತ್ರಗಳಿಗೆ ಸಾಮಾನ್ಯವಾದ ಕರ್ಮಪರವಾದ ಅರ್ಥವನ್ನು ಹೇಳಿದಾಗ ಆ ಅರ್ಥಕೊರತೆಯ ದೋಷವು ವೇದಕ್ಕೆ ಎಂದಿಗೂ ಸಲ್ಲಸತಕ್ಕುದ್ದಲ್ಲ. "**ಕಟುಕಂಟಕಾನೇಕಮೋಳಕ ಕಿಂ ಕದಲೀಫಲಾಥಃ**"—ಎಂದರೆ ಮುಳ್ಳನ್ನು ತಿನ್ನತಕ್ಕಂತಹ ಒಂಟೆಗೆ ಬಾಳೆಹಣ್ಣು ಸೇರದಿದ್ದರೆ ಅದು ಬಾಳೆಹಣ್ಣಿನ ದೋಷವಲ್ಲ. ಆಚಾರ್ಯ ಮಧ್ವರ ವ್ಯಾಖ್ಯಾನ ವೈಖರಿಯನ್ನು ಆಧುನಿಕ ವೇದಭಾಷ್ಯ-ಕಾರರಾದ ಶ್ರೀ ಕಪಾಲಿ ಶಾಸ್ತ್ರೀಗಳು ತಮ್ಮ "**ಮಂತ್ರಾರ್ಥಮಂಜರಿಯೂ ಶ್ರೀ ಕಪಾಲಿ ಶಾಸ್ತ್ರೀಗಳೂ—ಋಗ್ವೇದ ಸಂಹಿತಾ**" ಎಂಬ (ಸಂಸ್ಕೃತ) ಗ್ರಂಥದಲ್ಲಿ ಹೀಗೆ ಅಭಿಪ್ರಾಯ ಪಟ್ಟಿದ್ದಾರೆ. "**ನ ಕೋಽಪ್ಯಾಸೀತ್ ವೇದಾನಾಮಧ್ಯಾತ್ಮಪರತ್ವಪಕ್ಷಸ್ಯ ಉಜ್ಜೀವನಾಯ ಪ್ರವೃತ್ತಃ ಇತಿ ನ ಶಕ್ಯಂ ವದಿತುಂ, ಆಚಾರ್ಯ ಮಧ್ವಗ್ರಂಥೇಷು ಜಾಗ್ರತ್ಸು.**" (ಅಂದರೆ, ಮಾಧ್ವ ಗ್ರಂಥಗಳು ಇರುವವರೆಗೆ ವೇದಗಳು ಆಧ್ಯಾತ್ಮಪರವಲ್ಲವೆಂದು ಹೇಳಲು ಸಾಧ್ಯವಿಲ್ಲ.) ಇಂತಹ ಅನೇಕ ಅಂಶಗಳನ್ನು ಪರಿಶೀಲಿಸಿದಾಗ ಆಚಾರ್ಯ ಮಧ್ವರ ಋಗ್ಭಾಷ್ಯ ಅತ್ಯಂತ ಮಹತ್ವಪೂರ್ಣವಾದುದೂ ವೈಶಿಷ್ಟ್ಯಯುಕ್ತವಾದುದೂ ಎಂಬ ಸುಜ್ಞಾನ ಉಂಟಾಗದೇ ಇರುವದಿಲ್ಲ. ಕೊನೆಯದಾಗಿ, ಶ್ರೀ ಕಪಾಲಿಶಾಸ್ತ್ರೀಗಳು ತಮ್ಮ Lights on Vedas ಎಂಬ ಗ್ರಂಥದಲ್ಲಿ ವ್ಯಕ್ತಪಡಿಸಿದ ಇಲ್ಲಿ ಉದಾಹರಿಸಬಹುದಾಗಿದೆ :—

"Again, the tradition that the Vedic hymns are supremely spiritual in their import was recovered by ·Anandatirtha, the Dwaita teacher known as Madhwacharya. This shows clearly that there was, even before Sayana a school of Vedic interpreters holding that though ritual worship was part of the Vedic religion and as such, the mantras present as aspect avourable to it, yet, the inner meaning of the mantras was spiritualf and the highest aim and use of Veda was God knowledge and the attainment of the supreme end of life possible for man."

ಡಾ. ಕೆ. ಬಿ. ಅರ್ಚಕ, ಎಂ. ಎ. ಪಿಎಚ್. ಡಿ.
ಸಂಸ್ಕೃತ ಪ್ರಾಧ್ಯಾಪಕರು,
ಕರ್ನಾಟಕ ಕಲಾ ಮಹಾವಿದ್ಯಾಲಯ,
ಧಾರವಾಡ

ಅನಧೀತ್ಯ ದ್ವಿಜೋ ವೇದಾನ್ ಯೋಽನ್ಯತ್ರ ಕುರುತೇಶ್ರಮಂ ।
ಸ ಜೀವನ್ನೇವ ಶೂದ್ರತ್ವಂ ಆಶು ಗಚ್ಛತಿ ಸಾನ್ವಯಃ ॥

(ಯಾವ ದ್ವಿಜನು ವೇದವನ್ನು ಅಧ್ಯಯನ ಮಾಡದೆ ಬೇರೇನೇನನ್ನೋ ಓದುವನೋ, ಅವನು ಬದುಕಿಯೂ, ವಂಶಸಮೇತವಾಗಿ, ಶೂದ್ರನಾಗುವನು.)

# ವೇದಗಳು ಮತ್ತು ಧರ್ಮಶಾಸ್ತ್ರ

ಬಾನಗಲಾಗಿ ಬೆಳೆದ ಭಾರತೀಯ ಆಧ್ಯಾತ್ಮ ಪ್ರಪಂಚದ ಬೆನ್ನೆಲುಬು ವೇದ. ಅನಾದಿ ನಿತ್ಯವಾದ ಈ ಆರ್ಷವಾಣಿ ಸಾರ್ವಕಾಲಿಕ ಸತ್ಯವನ್ನು ವಿಶ್ವಕ್ಕೆ ಅರುಹುವದು. ಇದು ನಿತ್ಯನೂತನವಾದ ಸನಾತನ ಧರ್ಮ. ವಿಶ್ವದ ವಿಚಾರ ಪರಂಪರೆಯ ಗಂಗೋತ್ರಿ. ವಿಶ್ವ ಜೀವನದ ಆರಂಭದಲ್ಲಿ ಭಗವಂತನ ಮುಖದಿಂದ ಪ್ರಕಟವಾದ ನಿತ್ಯಗ್ರಂಥ.

"ತೇನೇ ಬ್ರಹ್ಮ ಹೃದಾಯ ಆದಿಕವಯೇ" (ಭಾಗವತ ೧-೨)
(ಆದಿಕವಿ ಬ್ರಹ್ಮನಿಗೆ ಮೊದಲು ದೇವ ವೇದ ಉಸುರಿದ.)
"ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ॥
(ಶ್ವೇತಾಶ್ವತರೋಪನಿಷತ್ ೬-೧೮)

ಬ್ರಹ್ಮನಿಗೆ ಅವತಾರ ಇತ್ತು, ಅವನಿಗೆ ಎಲ್ಲ ವೇದಗಳನ್ನು ಭಗವಂತ ಉಪದೇಶಿಸುವನೆಂಬ ಮಾತು ವಿಶ್ವದ ಆದಿಯಲ್ಲಿ ವೇದಗಳು ಮಾನವನ ಉದ್ಧಾರಕ್ಕಾಗಿ ಉದ್ಭವಿಸಿದವೆಂಬುದನ್ನು ತಿಳಿಸುವವು. ವೇದವೇ ಎಲ್ಲಕ್ಕೂ ಮೂಲ. ವೇದದಿಂದಲೇ ಎಲ್ಲ ಜ್ಞಾನ ಹರಿದು ಬಂದಿತು. ಪ್ರಕಟವಾಯಿತು. ವೇದ ತಿಳಿಸಿದ ಮಾತೇ ವೇದ ಧರ್ಮ. ವೇದ ಧರ್ಮ ಎರಡು ಬಗೆ. ಒಂದು ತತ್ತ್ವಜ್ಞಾನ ಅಥವಾ ವಿಚಾರ ರೂಪವಾದದ್ದು. ಇನ್ನೊಂದು ವಿಚಾರಕ್ಕೆ ತಕ್ಕುದಾದ ಆಚಾರ ಅಥವಾ ಕರ್ತವ್ಯ ಕರ್ಮಗಳನ್ನು ತಿಳಿಸತಕ್ಕದ್ದು. ಈ ವಿಚಾರ ಆಚಾರಗಳೇ ಧರ್ಮವೆನಿಸುವವು. ವೇದ ತಿಳಿಸಿದ ವಿಚಾರಗಳೆಲ್ಲ ವೇದಾಂತ ಎನಿಸಿದವು. ವೇದ ತೋರಿದ ಆಚಾರವೆಲ್ಲವೂ ಜೀವನಶಾಸ್ತ್ರ ಅಥವಾ ಧರ್ಮಶಾಸ್ತ್ರವೆನ್ನಿಸಿತು. ಆಚಾರ-ವಿಚಾರಗಳಿಂದ ಯುಕ್ತವಾದದೇ ವೇದ. ಆದ್ದರಿಂದ ಧರ್ಮಕ್ಕೆ ಮೂಲ-ವಾದವನ್ನು ಅಪೌರುಷೇಯವಾದ ವೇದ ಎಂಬುದು ಪ್ರಾಚೀನರ ಮಾತು.

ವೇದೋಽಖಿಲೋ ಧರ್ಮಮೂಲಮ್ । ಮನುಸ್ಮೃತಿ ೨-೧೩-೬
(ಎಲ್ಲ ವೇದಗಳೇ ವಿಶ್ವಧರ್ಮಕ್ಕೆ ಮೂಲ.)
(ಧರ್ಮವನ್ನು ತಿಳಿಯ ಹೊರಟವರಿಗೆ ಮುಖ್ಯ ಪ್ರಮಾಣವೇ ವೇದ)
"ಧರ್ಮಜ್ಞ ಸಮಯಃ ಪ್ರಮಾಣಂ ವೇದಾಶ್ಚ" ಆಪಸ್ತಂಬ, ಧ. ಸೂತ್ರ.
(ವೇದಗಳು ಹಾಗೂ ಧರ್ಮಜ್ಞರ ಗ್ರಂಥಗಳು (ಸ್ಮೃತಿಗಳು) ಪ್ರಮಾಣವಾಗಿವೆ.)
"ನಾಸ್ತಿ ವೇದಾತ್ ಪರಂ ಶಾಸ್ತ್ರಮ್—ಅತ್ರಿಸ್ಮೃತಿ
(ವೇದಕ್ಕಿಂತ ಮಿಗಿಲಾದ ಶಾಸ್ತ್ರವಿಲ್ಲ)
ನ ವೇದ ಶಾಸ್ತ್ರಾತ್ ಅನ್ಯತ್ತು ಕಿಂಚಿತ್ ಶಾಸ್ತ್ರಂ ಹಿ ವಿದ್ಯತೆ ।
ನಿಸ್ಸೃತಂ ಸರ್ವಶಾಸ್ತ್ರಂ ತು ವೇದಶಾಸ್ತ್ರಾತ್ ಸನಾತನಾತ್ ॥ ಯಾಜ್ಞವಲ್ಕ್ಯ ಸ್ಮೃತಿ.

ವೇದಶಾಸ್ತ್ರಕ್ಕಿಂತ ಬೇರೆಯಾದ ಇನ್ನೊಂದು ಶಾಸ್ತ್ರವಿಲ್ಲ. ಸನಾತನವಾದ ವೇದಶಾಸ್ತ್ರದಿಂದಲೇ ಎಲ್ಲ ಶಾಸ್ತ್ರಗಳೂ ಉದ್ಭವಿಸಿವೆ.

ಈ ವಿಶ್ವಪ್ರಪಂಚದ ಶಾಶ್ವತ ಸಂವಿಧಾನವೇ ವೇದ. ವೇದ ಸಂವಿಧಾನಕ್ಕೆ ಅನುಗುಣವಾಗಿ

ವಿಶ್ವದಲ್ಲಿ ಶಾಸನ ಮಾಡುವವನೇ ಶಾಸಕನಾದ ಪರಮಾತ್ಮ. ಈ ಶಾಸನಕ್ಕೆ ಒಳಗಾದವರೇ ಶಾಸಿತರಾದ ಜೀವರಾಶಿಗಳು.

ಪ್ರತಿಯೊಬ್ಬ ವ್ಯಕ್ತಿಯು ವೇದ ಹೇಳಿದ ಧರ್ಮಕ್ಕೆ ಅನುಗುಣವಾಗಿ ಬಾಳಲಿಕ್ಕೆ ಹೇಳಲು ಈ ವಿಶ್ವಧರ್ಮವಾದ ವೇದಶಾಸ್ತ್ರ ಹೊರಟದ್ದು.

## ಧರ್ಮವೆಂದರೇನು ?

ಹಸನಾದ ಬದುಕಿಗೆ ಕಾರಣವಾದದ್ದೇ ಧರ್ಮ. ಹಗಲು ರಾತ್ರಿ ಮನುಷ್ಯ ಯಾವುದಕ್ಕಾಗಿ ಹೆಣಗುವನೋ, ಯಾವುದನ್ನು ಪಡೆಯಲು ಹಂಬಲಿಸುವನೋ, ಯಾವುದಕ್ಕಾಗಿ ಮಾಡುವನೋ, ದುಡಿಯುವನೋ ಅದು ಸುಖ. ಸುಖಕ್ಕಾಗಿಯೇ ಇಷ್ಟೆಲ್ಲ ಯತ್ನ. ಆ ಸುಖ ದೊರೆಯುವದು ಧರ್ಮ ದಿಂದ. ಆದ್ದರಿಂದ ಸುಖದ ಸಾಧನೆಯೇ ಧರ್ಮ. "ಧರ್ಮಾದರ್ಥಶ್ಚ ಕಾಮಶ್ಚ". ಧರ್ಮದಿಂದಲೇ ಐಶ್ವರ್ಯ ಸುಖ, ಭೋಗಗಳು ಎಂದು ವ್ಯಾಸ ವಾಣಿ. "ಧರತಿ ವಿಶ್ವಮಿತಿ ಧರ್ಮಃ" "ಧಾರಣಾತ್ ಧರ್ಮ ಇತ್ಯಾಹುಃ" "ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" ಎಂಬ ಅನೇಕ ಪ್ರಮಾಣಗಳು ಧರ್ಮದ ಪರಿಭಾಷೆಯನ್ನು ತಿಳಿಸುವವು ಜಗತ್ತಿನಲ್ಲಿ ಎಲ್ಲ ಜನರ ಜೀವನಕ್ಕೆ ಆಧಾರವಾಗಿರುವದೇ ಧರ್ಮ. ಯಾವುದರಿಂದ ಮನುಷ್ಯ ಜೀವನದ ಉನ್ನತಿ, ಅಭ್ಯುದಯ, ಪ್ರಗತಿಯಾಗುವದೋ ಅದು ಧರ್ಮ. ಬದುಕಿನ ಸುಖಶಾಂತಿಗೆ ಕಾರಣವಾದದ್ದು ಧರ್ಮ. ಜೀವನದ ಸುಗಮತೆಗೆ ಕಾರಣವಾದದ್ದು ಧರ್ಮ. "ಧರ್ಮೇಣೈವ ಪ್ರಜಾಃ ಸರ್ವೇ ರಕ್ಷಂತಿ ಸ್ಮ ಪರಸ್ಪರಮ್". ಧರ್ಮದಿಂದಾಗಿಯೇ ಕೃತಯುಗದಲ್ಲಿ ಪ್ರಜೆಗಳ ಪರಸ್ಪರ ಸಂರಕ್ಷಣೆ ಆಗುತ್ತಿದ್ದಿತು."

ಇವೆಲ್ಲವುಗಳ ಅವಲೋಕನದಿಂದ ತೋರುವ ತಥ್ಯವೆಂದರೆ ಮಾನವ ಜೀವನಕ್ಕೆ ಸುಖ, ಶಾಂತಿ, ಸಮೃದ್ಧಿ, ಅಭಿವೃದ್ಧಿಗಳನ್ನು ತಂದುಕೊಡಲು ಸಾಧನವಾದುದೇ ಧರ್ಮ.

## ಶಾಸ್ತ್ರವೆಂದರೇನು ?

ಬ್ರಹ್ಮನಾಗಲಿ, ಧರ್ಮವಾಗಲಿ ಕಣ್ಣಿಗೆ ಕಾಣದ ವಸ್ತುಗಳು. ಅತೀಂದ್ರಿಯವಾದ ವಸ್ತು ವಿಷಯಕ ವಿವರಣೆ ನೀಡುವದೇ ಶಾಸ್ತ್ರ. ಅದೇ ವೇದ.

"ಪ್ರವೃತ್ತಿರ್ವಾ ನಿವೃತ್ತಿರ್ವಾ ನಿತ್ಯೇನ ಕೃತಕೇನ ವಾ ।
ಶಾಸನಾತ್ ಶಂಸನಾಚ್ಚೈವ ಶಾಸ್ತ್ರಮಿತ್ಯಭಿಧೀಯತೆ ॥ ಕುಮಾರಿಲಭಟ್ಟ

ಮಾಡಬೇಕಾದ ಕರ್ತವ್ಯಗಳ ಬಗ್ಗೆ ಪ್ರವೃತ್ತಿಯಾಗಲಿ, ಮಾಡಬಾರದ ಕರ್ತವ್ಯಗಳ ನಿವೃತ್ತಿಯಾಗಲಿ ಯಾವುದರಿಂದ ಹೇಳಲ್ಪಡುವದೋ, ಮಾಡಬೇಕಾದದ್ದನ್ನು ಬಿಡಬೇಕಾದದ್ದನ್ನು ಯಾವುದು ತಿಳಿಸು ವದೋ ಅದೇ ಶಾಸ್ತ್ರವೆನ್ನಿಸುವದು. ಇವನ್ನು ವಿಧಾನ ಮಾಡುವದು ಹಾಗೂ ಅದನ್ನು ಪ್ರಶಂಸಿಸು ವದು ಶಾಸ್ತ್ರ.

ಪ್ರತ್ಯಕ್ಷೇಣ ಅನುಮಿತ್ಯಾವಾ ಯಸ್ತೂಪಾಯೋ ನ ವೇದ್ಯತೇ ।
ಏನಂ ವಿದಂತಿ ವೇದೇನ ತಸ್ಮಾತ್ ವೇದಸ್ಯ ವೇದತಾ ।

ಅತೀಂದ್ರಿಯವಾದ ಧರ್ಮವನ್ನು ತಿಳಿಯಲು, ಬಾಳಲು, ಪಡೆಯಲು ಪ್ರತ್ಯಕ್ಷದಿಂದ ಹಾಗೂ ಅನುಮಾನ ದಿಂದ ಯಾವ ಉಪಾಯ ಸಾಧನಗಳು ತಿಳಿಯದೇ ಇದ್ದಾಗ ಯಾವುದರಿಂದ ಈ ಉಪಾಯ, ಸಾಧನಗಳು ತಿಳಿದು ಬರುವವೋ ಅದೇ ವೇದ. ಅದೇ ಶಾಸ್ತ್ರ. ಅದೇ ಧರ್ಮ ತಿಳಿಸುವ ಧರ್ಮಶಾಸ್ತ್ರ.

"ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯ ವ್ಯವಸ್ಥಿತೌ ।
ಜ್ಞಾತ್ವಾ ಶಾಸ್ತ್ರ ವಿಧಾನೋಕ್ತಂ ಕರ್ಮಕರ್ತುಮಿಹಾರ್ಹಸಿ ।" ಗೀತಾ ೧೬–೨೪

ಮಾಡಬೇಕಾದದ್ದಾವುದು, ಮಾಡಬಾರದ್ದಾವುದು ಎಂಬ ವ್ಯವಸ್ಥೆಯನ್ನು ವಿಧಾನ ಮಾಡುವ ವಿಷಯ ದಲ್ಲಿ ಶಾಸ್ತ್ರವೇ ಪ್ರಮಾಣ. ಆದ್ದರಿಂದ ಶಾಸ್ತ್ರವೆನಿಸಿದ ವೇದ ಹೇಳುವ ವಿಧಿವಿಧಾನಗಳನ್ನು ಚೆನ್ನಾಗಿ ತಿಳಿದುಕೊಂಡು ಕರ್ಮಮಾಡಬೇಕೆಂದು ಗೀತೆಯಲ್ಲಿ ಶ್ರೀ ಕೃಷ್ಣನ ಮಾತು. ವಿಧಿ ನಿಷೇಧಗಳನ್ನು ತಿಳಿಸಿಕೊಡುವದೇ ಶಾಸ್ತ್ರ. ಅದು ವೇದವೆಂಬುದು ಎಲ್ಲರ ನಿರ್ಧಾರ.

ಅನಾದಿ ನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ ।
ಆದೌ ವೇದಮಯೀ ದಿವ್ಯಾ ಯತಃ ಸರ್ವಾ ಪ್ರವೃತ್ತಯಃ ॥
ನಾನಾರೂಪಂ ಚ ಭೂತಾನಾಂ, ಕರ್ಮಣಾಂ ಚ ಪ್ರವರ್ತನಮ್ ।
ವೇದ ಶಬ್ದೇಭ್ಯ ಏವಾದೌ ನಿರ್ಮಿಮೀತೇ ಸ ಈಶ್ವರಃ ॥
ಮಹಾಭಾರತ ಶಾಂತಿಪರ್ವ, ಮೋಕ್ಷಧರ್ಮ ೨೩೨–೨೪–೨೬

"ವಿಶ್ವದ ಆರಂಭದಲ್ಲಿ ಪರಮಾತ್ಮನ ಮುಖದಿಂದ ಅನಾದಿ ನಿತ್ಯವಾದ, ಅಪೌರುಷೇಯವಾದ ಮಾತು ವೇದರೂಪದಿಂದ ಹೊರಬಂದಿತು. ಆದ್ದರಿಂದಲೇ ವಿಶ್ವದ ಎಲ್ಲ, ಪ್ರವೃತ್ತಿಗಳು ಆರಂಭ ವಾದವು. ವೈವಿಧ್ಯಮಯರಾದ ಜೀವರು ವಿವಿಧ ಕರ್ಮಗಳಲ್ಲಿ ಆಸಕ್ತರಾಗುವಂತೆ ಎಲ್ಲ ಪ್ರೇರಣೆ, ಪ್ರಚೋದನೆಗಳನ್ನು ವೇದದಿಂದಲೇ ಈಶ್ವರ ಪ್ರಕಟಪಡಿಸಿದ". ಆದ್ದರಿಂದ ವೇದವೇ ಧರ್ಮಶಾಸ್ತ್ರ.

ಪಿತೃದೇವ ಮನುಷ್ಯಾಣಾಂ ವೇದಃಶ್ಚಕ್ಷುಃ ಸನಾತನಮ್ ।
ಚಾತುರ್ವರ್ಣ್ಯಂ ತ್ರಯೋಲೋಕಾಃ ಚತ್ವಾರಶ್ಚಾಶ್ರಮಾಃ ಪೃಥಕ್ ।
ಭೂತಂ ಭವ್ಯಂ ಭವಿಷ್ಯಂಚ ಸರ್ವಂ ವೇದಾತ್ ಪ್ರಸಿಧ್ಯತಿ ।
ಬಿಭರ್ತಿ ಸರ್ವಭೂತಾನಿ, ವೇದಶಾಸ್ತ್ರಂ ಸನಾತನಮ್ ।

ಪಿತೃಗಳು, ಮನುಷ್ಯರು, ದೇವತೆಗಳಿಗೆಲ್ಲ ನಿತ್ಯವಾದ ವೇದವೇ ಕಣ್ಣಿದ್ದಂತೆ. ಮೂರು ಲೋಕಗಳು ನಾಲ್ಕು ವರ್ಣಗಳು, ನಾಲ್ಕು ಆಶ್ರಮಗಳು, ಭೂತ, ಭವಿಷ್ಯ, ವರ್ತಮಾನ ಕಾಲದ ಎಲ್ಲ ಆಗು ಹೋಗುಗಳು ವೇದದಿಂದಲೇ ಪ್ರಸಿದ್ಧವಾಗುವವು. ತಿಳಿದು ಬರುವವು. ವೇದವೇ ವಿಶ್ವಮಾನವರ ಜೀವನಕ್ಕೆ ಆಧಾರವಾಗಿದೆ, ಎಂದು ಮನುವಿನ ಮಾತು. ಶ್ರೀ ಕೃಷ್ಣನೂ ಗೀತೆಯಲ್ಲಿ ಇದೇ ಮಾತನ್ನು ತಿಳಿಸಿದ್ದಾನೆ.

"ಕರ್ಮಬ್ರಹ್ಮೋದ್ಭವಂ ವಿದ್ಧಿ, ಬ್ರಹ್ಮಾಕ್ಷರ ಸಮುದ್ಭವಮ್—ಗೀತಾ ೩–೧೫

ಕರ್ಮವು ಬ್ರಹ್ಮ (ವೇದ)ದಿಂದ ಉದ್ಭವವಾಗಿದೆ. ವೇದವೇ ಎಲ್ಲ ಕರ್ಮಗಳ ವಿಧಿ ವಿಧಾನಕ್ಕೆ ಕಾರಣ ವಾಗಿದೆ. ವೇದದಿಂದಲೇ ಕರ್ಮೋತ್ಪತ್ತಿ, ವೇದವು ಅಕ್ಷರನಾದ ಪರಮಾತ್ಮನ ಶ್ವಾಸರೂಪವಾಗಿದೆ. ಎಂದು ಶಂಕರ–ರಾಮಾನುಜ–ಮಧ್ವರು ತಮ್ಮ ಗ್ರಂಥಗಳಲ್ಲಿ ನಿರೂಪಿಸಿರುವರು.

## ಬುದ್ಧ ಹಾಗೂ ವೇದಧರ್ಮ

ಭಗವಾನ್ ಬುದ್ಧನ ಮಾತುಗಳು ಸಂಗ್ರಹಗ್ರಂಥ ಸುತ್ತನಿಪಾತ. ಅದೂಕೂಡಾ ವೇದದ ಮಹತಿಯನ್ನು ತಿಳಿಸುವದು.

"ವಿದ್ವಾಚ ವೆದೇಹಿ ಸಮೇಚ್ಚ ಧಮ್ಮಂ (ವಿದ್ವಾಂಶ್ಚ ವೇದೈಃ ಸಮೇತ್ಯ ಧರ್ಮಂ)
ಸುತ್ತನಿಪಾತ ೨೯೨)

ವಿದ್ವಾಂಸನಾದ ಜ್ಞಾನಿ ವೇದಗಳಿಂದ ಧರ್ಮಗಳನ್ನು ಚೆನ್ನಾಗಿ ತಿಳಿದುಕೊಂಡು ಜಗತ್ತಿಗೆ ತಿಳಿಸಬೇಕು.

"ವಿದ್ವಾಂಸ್ಚ ಸವೇದಜ್ಞೋ ನರಃ ಇಹ ಭವಾಭವೇ ಸಂಗಮಿಮಾ ವಿಸ್ಸೃಜ್ಯ ।
ಸವೀತ ತೃಷ್ಣೋಽನಘೋ ನಿರಾಶೀಃ ಅತಾರೀತ್ ಸ ಜಾತಿಜರಾಮಿಂತಿ ಬ್ರವೀಮಿ ।
ಸುತ್ತನಿಪಾತ ೧೦೬೦

ವೇದಪರಿತ ಜ್ಞಾನಿ ಆದರಂತೆ ಬಾಳಿ ಸಂಸಾರದ ಬಂಧನವನ್ನು ಹರಿದುಕೊಂಡು, ಆಶೆ, ನಿರಾಶೆಗಳನ್ನು ಮೀರಿ, ಜನ ಮೃತ್ಯುವನ್ನು ದಾಟಿ ಹೋಗುವನೆಂದು ಬುದ್ಧನ ಮಾತು.

ಶೀಖ ಧರ್ಮದ ಪ್ರಧಾನ ಗ್ರಂಥವಾದ 'ಗುರುಗ್ರಂಥಸಾಹೇಬ' ದಲ್ಲಿಯೂ—
"ಹರಿ ಆಜ್ಞಾ ಹೋಯ ವೇದ ಪಾಪ ಪುನ್ ವಿಚಾರಿಯಾ"
ಮಾರುಡ ಖಣೆಮಹಲ್ಲಾ ೫–೧

ಹರಿಯ ಆಜ್ಞಾರೂಪವಾದ ವೇದದಿಂದಲೇ ಪುಣ್ಯಪಾಪಗಳನ್ನು ವಿಚಾರಮಾಡಿ ತಿಳಿಯಬೇಕೆಂದು ಹೇಳಿರುವರು.

ವೇದಗಳಿಂದ ಧರ್ಮವನ್ನು ಸಾಕ್ಷಾತ್ಕಾರ ಮಾಡಿಕೊಂಡು ಋಷಿಗಳು ವೇದ ಹಾಗೂ ಧರ್ಮ-ಶಾಸ್ತ್ರದ ರೂಪದಲ್ಲಿ ಅದನ್ನು ಜಗತ್ತಿಗೆ ನೀಡಿದರು.

## ವೇದ ಹಾಗೂ ಧರ್ಮಶಾಸ್ತ್ರ

ವೇದೋಖಿಲೋ ಧರ್ಮಮೂಲಮ್, ಸ್ಮೃತಿ ಶೀಲೇಚ ತದ್ವಿದ್ವಾಂ ।
ಆಚಾರ ಶ್ಚೈವ ಸಾಧೂನಾಂ ಆತ್ಮನಃಸ್ತುಷ್ಟಿರೇವಚ ॥
ವೇದಃ, ಸ್ಮೃತಿಃ ಸದಾಚಾರಃ ಸ್ವಸ್ಯಚ ಪ್ರಿಯಮಾತ್ಮನಃ ॥
ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಮ್ ॥

ಧರ್ಮವನ್ನು ತಿಳಿಸುವ ಮೊದಲಶಾಸ್ತ್ರ ವೇದವು. ಧರ್ಮಕ್ಕೆ ಅದುವೇ ಮೂಲ. ವೇದಬಲ್ಲವರಾದ ಜ್ಞಾನಿಗಳು ರಚಿಸಿದ 'ಸ್ಮೃತಿಗಳು' ಅನಂತರದ, ಧರ್ಮ ತಿಳಿಸುವ ಗ್ರಂಥಗಳು. ಶ್ರುತಿ ಸ್ಮೃತಿಗಳಿಗೆ ಅನುಗುಣವಾಗಿ, ಅವಿರೋಧವಾಗಿ ದೊಡ್ಡವರು ಆಚರಿಸುವ ಆಚಾರಗಳೆಲ್ಲ 'ಸಂಪ್ರದಾಯ'ವೆಂದು ಧರ್ಮದ ವಿಷಯದಲ್ಲಿ ಪ್ರಮಾಣವೆನಿಸುವವು. ವೇದಾದಿ ಶ್ರುತಿಗಳು, ಮನು, ಯಾಜ್ಞವಲ್ಕ್ಯ ಮೊದಲಾದ ಸ್ಮೃತಿಗಳು, ಹಾಗೂ ಸಂಪ್ರದಾಯಗಳು ಅನೇಕ ರೀತಿಯಲ್ಲಿ ಅವಿರೋಧವಾಗಿ ಧರ್ಮ ತಿಳಿಸಿದಾಗ ಆಚರಿಸುವ ವ್ಯಕ್ತಿಯ ಆತ್ಮತೃಪ್ತಿ, ಮನಸ್ಸಿಗೆ ಹಿತ ಹಾಗೂ ಸಮಾಧಾನ ನೀಡುವ,

ಯೋಗ್ಯತೆಗೆ ಅನುಕೂಲವಾಗಿರುವದೇ ಧರ್ಮವೆನ್ನಿಸುವದು. ಇವು ನಾಲ್ಕು ಧರ್ಮದ ಲಕ್ಷಣಗಳು.

ಧರ್ಮದ ಅಂಗಗಳು

೧) ವೇದಗಳಿಂದಲೇ ಪ್ರವರ್ತಿತವಾದದ್ದು (ವೇದವೆಂದರೆ ಸಂಹಿತಾ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳಿಂದ ಕೂಡಿದ್ದು) ಶ್ರುತಿಧರ್ಮ ಶಾಸ್ತ್ರವೆನ್ನಿಸುವದು.

೨) ರಾಮಾಯಣ, ಮಹಾಭಾರತಾದಿ ಇತಿಹಾಸಗಳಿಂದ, ಹದಿನೆಂಟು ಪುರಾಣಗಳಿಂದ, ಮನು, ಯಾಜ್ಞವಲ್ಕ್ಯ, ಪರಾಶರ, ಶಂಖ, ವಶಿಷ್ಠ, ಹಾರೀತಾದಿಗಳಿಂದ ರಚಿಸಲ್ಪಟ್ಟ ಸ್ಮೃತಿಗಳು "ಸ್ಮೃತಿಧರ್ಮವೆನ್ನಿಸುವವು".

೩) ಹೇಮಾದ್ರಿ, ಮಯೂಖ, ಮೇಧಾತಿಥಿ, ವಿಜ್ಞಾನೇಶ್ವರ, ಕಮಲಾಕರ ಮೊದಲಾದವರು ರಚಿಸಿದ ಸಂಗ್ರಹಾತ್ಮಕ ಹಾಗೂ ವಿಮರ್ಶಾತ್ಮಕ ಪ್ರಬಂಧಗಳು ನಿಬಂಧ ಧರ್ಮಶಾಸ್ತ್ರವೆನ್ನಿಸುವವು.

೪) ದತ್ತಕ ನಿರ್ಣಯ, ಗೋತ್ರಪ್ರವರ ನಿರ್ಣಯ, ಜಾತಿವಿವೇಕ, ಕರ್ಮವಿಪಾಕ, ಸಾಪಿಂಡ್ಯ ನಿರ್ಣಯ ಮೊದಲಾದ, ಒಂದೊಂದು ಪ್ರಕರಣದ ಬಗ್ಗೆ ರಚಿತ ಗ್ರಂಥಗಳು ಪ್ರಕರಣ ಧರ್ಮ ಶಾಸ್ತ್ರವೆನ್ನಿಸುವವು.

ಆದರೆ ಇವುಗಳಲ್ಲಿ ಎಲ್ಲಕ್ಕೂ ಪ್ರಧಾನವಾದ್ದು ಶ್ರುತಿಧರ್ಮಶಾಸ್ತ್ರ. ಅದಕ್ಕೆ ವಿರುದ್ಧವಾಗಿ ಯಾರು ಏನನ್ನು ಹೇಳಿದರೂ ಅದು ಅಪ್ರಮಾಣ.

ಪುರಾಣಸ್ಯೋಪಜೀವಶ್ಚ ವೇದ ಏವ ನ ಚಾಪರಃ ।
ತದ್ವಿರೋಧೇ ಕಥಂ ಮಾನಂ, ತತ್ರತ್ರ ಭವಿಷ್ಯತಿ

(ಮಧ್ವಾಚಾರ್ಯರು ಋಗ್ಭಾಷ್ಯದಲ್ಲಿ)

ವೇದವನ್ನು ಉಪಜೀವಿಸಿರುವದೇ ಪುರಾಣ. ವೇದಕ್ಕೆ ಅನುಸಾರಿಯಾದರೇ ಸ್ಮೃತಿಗಳಾದ ಪುರಾಣಾದಿಗಳು ಪ್ರಮಾಣವೆನಿಸುವವು. ವೇದವಿರೋಧಿಯಾದ ಪುರಾಣ ಸ್ಮೃತಿಗಳು ಪ್ರಮಾಣವಾಗಲಾರವು.

ಶ್ರುತಿ ಸ್ಮೃತಿ ವಿರೋಧೇತು ಶ್ರುತಿರೇವ ಗರೀಯಸೀ—ಜಾಬಾಲಃ
ಶ್ರುತ್ಯಾ ಸಹ ವಿರೋಧೇತು ಬಾಧ್ಯತೇ—ಭವಿಷ್ಯ ಪುರಾಣ
ಶ್ರುತಿ ವಿರೋಧೇ ಸ್ಮೃತಿವಾಕ್ಯಮ್ ಅನಪೇಕ್ಷ್ಯಮ್, ಅಪ್ರಮಾಣಂ,
ಅನಾದರಣೀಯಮ್–ಮೀಮಾಂಸಾಭಾಷ್ಯ ೧–೩–೩

ಎಂಬುವ ಅನೇಕ ಪ್ರಮಾಣಗಳು ವೇದ ವಿರೋಧಿಯಾದ ಧರ್ಮವಾಙ್ಮಯವನ್ನು ಅಪ್ರಮಾಣವೆಂದು, ವೇದಕ್ಕೆ ಅನುಸಾರಿಯಾದದ್ದನ್ನು ಪ್ರಮಾಣವೆಂದು ಸ್ಪಷ್ಟಪಡಿಸಿರುವರು. ಇದರಿಂದಾಗಿ ವೇದವೇ ಪ್ರಧಾನ ಧರ್ಮಶಾಸ್ತ್ರವೆಂಬು ಸಿದ್ಧವಾಗುವದು.

ಈ ಶ್ರುತಿಧರ್ಮ ಅನೇಕ ವಿಧವಾಗಿದೆ. ವ್ಯಕ್ತಿಯ ಜೀವನವನ್ನು ನಿಯಂತ್ರಿಸುವದು ವ್ಯಷ್ಟಿ–ಧರ್ಮ. ಇದು ವೈಯಕ್ತಿಕ ಬದುಕನ್ನು ತಿದ್ದುವ 'ಸತ್ಯಂವದ' 'ಧರ್ಮಂ ಚರ' ಮೊದಲಾದ ರೂಪದಲ್ಲಿದ್ದುದು.

ವ್ಯಕ್ತಿಗಳ ಸಮುದಾಯವೇ ಕುಟುಂಬ. ಕುಟುಂಬದ ಹಿತಕ್ಕೆ ಕಾರಣವಾದುದೇ ಕುಟುಂಬ ಧರ್ಮ ಅಥವಾ ಕುಲಧರ್ಮವೆನ್ನಿಸುವದು. ವ್ಯಕ್ತಿಯ ಬದುಕಿನಲ್ಲಿ ಆಗುವ ವೃದ್ಧಿ, ವಿಕಾಸ, ಹ್ರಾಸಗಳಿಗೆ ತಕ್ಕದ್ದಾಗಿ ನಿರೂಪಿಸಲ್ಪಟ್ಟದ್ದು ನೀತಿ ನಿಯಮಗಳನ್ನು ವಿಧಿಸಿದ್ದು ಬ್ರಹ್ಮಚರ್ಯ, ಗೃಹಸ

ಮೊದಲಾದ ಆಶ್ರಮಧರ್ಮ. ವೃತ್ತಿ ಹಾಗೂ ವಂಶ ಪದ್ಧತಿಯನ್ನು ಪಾರಂಪರಿಕವಾಗಿ ಇಡಲು ಜಾತಿಧರ್ಮ, ಸಮಗ್ರ ಜನಾಂಗದ, ಸಂಸ್ಕೃತಿಯ ಉತ್ಕರ್ಷ ಸಾಧಿಸಲು ವರ್ಣಧರ್ಮಗಳು ನಿರೂಪಿಸಲ್ಪಟ್ಟಿವೆ. ಈ ಎಲ್ಲ ಧರ್ಮಗಳಲ್ಲಿ ಮನೋವಿಜ್ಞಾನ, ದೇಹವಿಜ್ಞಾನ, ಹಾಗೂ ಸಮಾಜ ವಿಜ್ಞಾನ ತತ್ವಗಳು ಅಡಕವಾಗಿವೆ. ಈ ವೇದಧರ್ಮ, ಸಾರ್ವಕಾಲಿಕ ಸತ್ಯವನ್ನು ಹೊಂದಿರುವ, ವಿಶ್ವಮಾನವರ ಹಿತಬಯಸುವ, ಅಭಿವೃದ್ಧಿಗೆ ಕಾರಣವಾದ ಜೀವನಪದ್ಧತಿ.

ವೇದದಲ್ಲಿ ಎಲ್ಲ ವಿಧದ ಧರ್ಮಶಾಸ್ತ್ರ ಹೇಳಲ್ಪಟ್ಟಿದೆ.

"ಮನುಃ ಪುತ್ರೇಭ್ಯೋ ದಾಯಂ ವ್ಯಭಜತ್" ತೈ, ಸಂ ೩-೧-೯-೪
"ತಸ್ಮಾಜ್ಯೇಷ್ಠಂ ಪುತ್ರಂ ಧನೇನ ನಿರವಸಾಯಯಂತಿ" ತೈತ್ತಿರೀಯ, ಸಂ ೨-೫-೨-೭
'ಅಲುಪ್ತಾ ಧರ್ಮ ಕಾಮಾಸ್ಯುಃ' 'ತಾತ್ವಿಕ ಧರ್ಮಶಾಸ್ತ್ರಗಳನ್ನು ಸ್ಪಷ್ಟವಾಗಿ ಕಾಣಬಹುದು.

ಆಧುನಿಕ ಜೀವನದಲ್ಲಿ ಕಾಣಸಿಗುವ ಹಲವಾರು ಸಮಸ್ಯೆಗಳ ಬಗ್ಗೆ ವೇದವು ಏನನ್ನೂ ಹೇಳಲಿಲ್ಲ, ಹೇಳಿಲ್ಲವೆಂದು ಕಾಣಬಹುದು. ಅದರ ಹಿನ್ನೆಲೆಯಲ್ಲಿ ಎರಡು ಕಾರಣಗಳಿವೆ. ಮೊದಲನೆಯದಾಗಿ ಅವಾಂತರ ಅನೇಕ ಶಾಖೆಗಳನ್ನು ಹೊಂದಿರುವ ವೇದ ಇಂದು ಸಮಗ್ರವಾಗಿ ಉಪಲಬ್ಧವಿಲ್ಲ. ಋಗ್ವೇದದ ಇಪ್ಪತ್ತೊಂದು ಶಾಖೆಗಳಲ್ಲಿ ಇಂದು 'ಶಾಕಲ' ಶಾಖೆ ಮಾತ್ರವಿದೆ. ದೊರೆಯದೇ ಇದ್ದ ಶಾಖೆಗಳಲ್ಲಿ ಇವುಗಳ ಉಲ್ಲೇಖವನ್ನು ತಿಳಿಯಬಹುದು. ಇದಲ್ಲದೇ ವೇದಕ್ಕೆ ಮೂರು ರೀತಿಯ ಅರ್ಥಗಳುಂಟು. ನಾವು ಯಾವುದೋ ಒಂದು ಅರ್ಥ ತಿಳಿದಾಗ ಇನ್ನೊಂದು ಅರ್ಥ ವಿವರಣೆ ಇಲ್ಲವೆಂದು ಭಾವಿಸಬಾರದು.

ಹಲವು ಸಲ ವೇದ ಕೆಲವು ಆಚಾರಗಳಿಗೆ ಮಹತ್ವ ನೀಡುವದಿಲ್ಲ. ಅದನ್ನು ನಾವಿಂದು ಮುಖ್ಯವಾಗಿ ತಿಳಿಯುತ್ತಿರುತ್ತೇವೆ. ದತ್ತಕ ವಿಧಾನ, ಅವನಿಗೆ ಸಂಪತ್ತಿನ ಅಧಿಕಾರದ ಬಗ್ಗೆ ವೇದದಲ್ಲಿ ವಿವರಣೆ ಸ್ಪಷ್ಟವಾಗಿ ತಿಳಿಯಲಾರದೆಂದು ಹಲವರು ಹೇಳುವರು. ಇದಕ್ಕೆ ಕಾರಣವಿದೆ. ವೇದಧರ್ಮಶಾಸ್ತ್ರದ ದೃಷ್ಟಿಯಲ್ಲಿ ಮನುಷ್ಯನು ಯಾವ ಪಾರಂಪರಿಕ, ವಂಶಗತ ಸಂಪತ್ತಿಗೆ ಯಜಮಾನನಾಗಲಾರ. ಆ ದೃಷ್ಟಿಯಿಂದ ವಿವರಣೆ ಇಲ್ಲದೇ ಇರಬಹುದು.

ಹಲವು ಸಲ ಮೂಲವಾಗಿ, ಬೀಜಭೂತವಾಗಿ ವೇದ ತಿಳಿಸುವದು. ಉಳಿದ ವ್ಯಾಪಕ ವಿವರಣೆ ಸ್ಮೃತಿ, ಸಂಪ್ರದಾಯಗಳಿಂದ ದೊರೆಯುವದು. ಯಜ್ಞೋಪವೀತ ಧರಿಸಬೇಕೆಂದು ವೇದ ತಿಳಿಸಿತು. ಎಷ್ಟು, ಹೇಗೆ, ಏಕೆ ಎಂಬುದನ್ನು ಸ್ಮೃತಿ ತಿಳಿಸುವದು. ಈ ಮಾತನ್ನು ಮೀಮಾಂಸಾಶಾಸ್ತ್ರ ಪ್ರವರ್ತಕರಾದ ಕುಮಾರಿಲಭಟ್ಟರು ತಮ್ಮ ಬೃಹಟ್ಟೀಕಾದಲ್ಲಿ ತಿಳಿಸುವರು.

ಧರ್ಮೇ ಪ್ರಮೀಯಮಾಣೇ ಹಿ ವೇದೇನ ಕರಣಾತ್ಮನಾ ।
ಇತಿ ಕರ್ತವ್ಯತಾ ಭಾಗಂ ಮೀಮಾಂಸಾ ಪೂರಯಿಷ್ಯತಿ ॥

ವೇದದಿಂದ ತಿಳಿದು ಬರುವ ಧರ್ಮ ವಿಧಾನಗಳನ್ನು, ವೇದ ತಿಳಿಸುವ ಆಚಾರ ಧರ್ಮದ ವಿಧಿ ವಿಧಾನಗಳ ಭಾಗವನ್ನು ಮೀಮಾಂಸಾ ಪೂರ್ಣಗೊಳಿಸುವದು. ವೇದ ಬೀಜರೂಪವಾಗಿ, ಸೂಕ್ಷ್ಮವಾಗಿ ಧರ್ಮ ವಿಧಾನ ಮಾಡುವದು. ಹಲವಾರು ರೀತಿಯ ಆಚಾರ ಸಂಪ್ರದಾಯಗಳು ಆಚರಣೆಯಲ್ಲಿ ಬಂದಮೇಲೆ ಅವುಗಳ ಬಗ್ಗೆ ವೇದಧರ್ಮ ನಿರ್ಮಾಣವಾಗಿಲ್ಲ. ವೇದವು ಮೊದಲು ತಾನು ಮೂಲದಲ್ಲಿ ಹಲವು ಆಚಾರಗಳನ್ನು ವಿಧಿಸಿತು. ಅವು ಮುಂದೆ ಸ್ಮೃತಿ ಹಾಗೂ ಸಂಪ್ರದಾಯ ಮೂಲಕವಾಗಿ ವಿಸ್ತಾರ

ವಾಗಿ ಬೆಳೆದವು. ವೇದಧರ್ಮ ಅಪರಿವರ್ತನೀಯವಾದದ್ದು. ಉಳಿದ ಮಾತಂಗಳು ಪರಿವರ್ತನ ಶೀಲ ವಾದವುಗಳು.

ಮನುಷ್ಯನ ಬದುಕಿನ ಇಚ್ಛೆಯನ್ನು ವೇದವು ಏಳು ರೀತಿಯಾಗಿ ವಿಭಜಿಸಿತು. ಇವು ಸ್ವಾಭಾವಿಕಃ

"ಸ್ತುತಾ ಮಾಯಾ ವರದಾ ವೇದಮಾತಾ............ಆಯುಃ, ಪ್ರಾಣಂ
ಪ್ರಜಾಂ, ಪಶುಂ, ಕೀರ್ತಿಂ, ದ್ರವಿಣಂ, ಬ್ರಹ್ಮವರ್ಚಸವ್ ದತ್ವಾ ವ್ರಜತ
ಬ್ರಹ್ಮಲೋಕವ್—ಅಥರ್ವವೇದ ೧೯-೭೧-೧

"ಆಯುಷ್ಯ, ಬಲ, ಸಂತಾನ, ಪಶು, ಕೀರ್ತಿ, ಧನ, ಹಾಗೂ ವೈದಿಕಜ್ಞಾನ ಇವನ್ನು ನೀಡಿ ನನ್ನನ್ನು ಬ್ರಹ್ಮಲೋಕಕ್ಕೆ ತಲುಪಿಸು" ಎಂಬ ಪ್ರಾರ್ಥನೆಯಲ್ಲಿ ವ್ಯಕ್ತಿ ಹಾಗೂ ಸಮಾಜ ಜೀವನದ ಧರ್ಮಶಾಸ್ತ್ರದ ವಿಷಯಗಳ ಸುಳುವು ಇದೆ. ಫ್ರುನಾಲಾಜಿಯಲ್ಲಿಯೂ ಇವನ್ನೇ ಮನುಷ್ಯನ ನೈಸರ್ಗಿಕ ಇಚ್ಛೆಗಳೆಂದು ತಿಳಿಸಿದ್ದಾರೆ. ಇವುಗಳ ಬಗ್ಗೆ ವಿವರಣೆಯನ್ನು, ವಿಧಿ ನಿಷೇಧಗಳನ್ನು ತಿಳಿಸುವದೇ ಧರ್ಮಶಾಸ್ತ್ರ ಇವುಗಳನ್ನು ಸಂಪಾದಿಸುವ ಕ್ರಮ, ವಿನಿಯೋಗಿಸುವ ವಿಧಾನ, ಪಡೆಯುವ ಪ್ರಯೋಜನ ತಿಳಿಸುವದೇ ಶ್ರುತಿಧರ್ಮಶಾಸ್ತ್ರ. ಇವುಗಳ ವಿಶಾಲ ವಿವರಣೆಯೇ ಇನ್ನುಳಿದ ಧರ್ಮಶಾಸ್ತ್ರ.

ವರ್ಣಧರ್ಮ, ಆಶ್ರಮಧರ್ಮ, ಗೃಹಸ್ಥನ ಬದುಕು, ದಾಂಪತ್ಯ ಜೀವನ, ಸಾಮಾಜಿಕ ವ್ಯವಹಾರ, ಸದಾಚಾರ, ವಿವಾಹವೇ ಮೊದಲಾದ ಎಲ್ಲ ಸಂಸ್ಕಾರ ಉದ್ಯೋಗ, ಜೀವಿಕೆ, ಜ್ಞಾನ–ವಿಜ್ಞಾನ, ಸಮಾಜ, ಸಾಮ್ರಾಜ್ಯ ಇವೆಲ್ಲ ವಿಷಯಗಳನ್ನು ಇವೇ ಶಬ್ದಗಳಲ್ಲಿ ಉಲ್ಲೇಖಿಸುತ್ತ ವೇದವು ಎಲ್ಲ ವಿಧದ ಧರ್ಮ ಶಾಸ್ತ್ರವನ್ನು ವಿಧಾನ ಮಾಡುತ್ತದೆ. ವಿವರಣೆ ನೀಡುತ್ತದೆ.

ಇವೆಲ್ಲ ವಿಷಯಗಳ ವಿವರಣೆಯನ್ನು ವೇದದ ನೂರಾರು ಮಂತ್ರಗಳಲ್ಲಿ ನಿರೂಪಿತವಾದದ್ದನ್ನು ನಾವು ಕಾಣಬಹುದು ಅದು ವೇದದ ಧರ್ಮಶಾಸ್ತ್ರ ಅಥವಾ ವೇದ ನಿರೂಪಿಸಿದ ಮಾನವ ಧರ್ಮ. ಅತಿ ವ್ಯಾಪಕವಾದ ಈ ವಿಷಯಗಳನ್ನು ಪ್ರತ್ಯೇಕ ವೇದದ ದೇಶವಾಗಿ ತಿಳಿಯಬಹುದು.

ವೇದ ಇದು ಧರ್ಮಕ್ಕೆ ಮೂಲ. ವೇದದಿಂದಲೇ ಧರ್ಮಶಾಸ್ತ್ರ. ವೇದವಾಣಿಯೇ ವಿಶ್ವಧರ್ಮ. ವೇದವೇ ಸರ್ವರ ಮಾತೆ.

ವಿದ್ವಾನ್ ಮಳಗಿ ಜಯತೀರ್ಥಾಚಾರ್ಯ
ಶಾಸ್ತ್ರೀ (ಅಧ್ಯಾಪಕರು)
ಸಂಸ್ಕೃತ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

# ಪಂಡಿತ ಪ್ರತಿಭಾವಂತ ವೇದಜ್ಞರಾದ ನಮ್ಮ ನಾರಾಯಣಾಚಾರ್ಯರು

ವೇದವಾಙ್ಮಯಗಳು ಕಡೆಗಣಿಸಲ್ಪಟ್ಟು ಮರೆತು ಹೋಗಿರುವ ಇಂದಿನ ಈ ಯುಗದಲ್ಲಿ—ಯಾವ ಯುಗ ಎನ್ನೋಣ ? ಅನಿಷ್ಟಕಾರಕ ಎಂದರೆ ಸಾಕಲ್ಲ ? —"ನಾಗರೀಕತೆಗೂ, ಸಂಸ್ಕೃತಿಗೂ ತಿಕ್ಕಾಟ ಆರಂಭವಾಗಿದ್ದು ಮಾನವನ ಸರ್ವನಾಶಕ್ಕೆ ನೇರವಾದ ರಸ್ತೆ ನಿರ್ಮಾಣವಾಗಿದೆ" ಎಂದು ತಳಮಳಿಸಿ ನುಡಿದಿದ್ದಾರೆ ಪ್ರಾಧ್ಯಾಪಕ ನಾರಾಯಣಾಚಾರ್ಯರು. (ವೇದ ಸಂಸ್ಕೃತಿ ಪರಿಚಯ, ಸಂಪುಟ ೧, ಪೀಠಿಕೆ. ಪು. ೧.) ವೇದಾಭ್ಯಾಸದ ಉದ್ದೇಶ ವೇದಾರ್ಥಜ್ಞಾನ, ಪರಮಾರ್ಥ ಜ್ಞಾನವಲ್ಲದೆ ವೇದಕಾಲದ ನಾಗರೀಕತೆಯನ್ನು ಅಗೆದು ನೋಡುವುದಲ್ಲ. ಪುರುಷ ಸೂಕ್ತದಲ್ಲಿ 'ಅತ್ಯತಿಷ್ಠತ್ ದಶಾಂಗುಲಂ' ಎಂದಿದ್ದರೆ ಅದು ಪರಮಾತ್ಮನ ಸ್ವರೂಪವನ್ನು ಭಾವಿಸದೆ ಆಗಿನ ಕಾಲದ ಜನರಿಗೂ ಕೈಗಳಿಗೆ ಹತ್ತು ಬೆರಳುಗಳೆ ಇದ್ದುವು ಎಂಬುದಂ ವ್ಯಕ್ತವಾಗುತ್ತದೆ ಎಂಬ ಪಾಶ್ಚಾತ್ಯೀಕೃತ ಕನ್ನಡಕಗಳನ್ನು ಧರಿಸಿ ಸಂಶೋಧಕ ಪ್ರಕಾಶವನ್ನು ಚೆಲ್ಲ ಹೋದರೆ ಎಷ್ಟು ಅನರ್ಥವಾಗುತ್ತದೆಂಬ ಅಂಶವನ್ನು ಏಡಿಸಿ, ವಿಡಂಬಿಸಿ ಎತ್ತಿ ಹೇಳಿದ್ದಾರೆ ನಾರಾಯಣಾಚಾರ್ಯರು.

ಹೀಗೆ ವೇದಾಧ್ಯಯನಕ್ಕೆ ಹೊಸದೊಂದು ತಿರುವನ್ನು ಕೊಟ್ಟು, ಹೊಸದೇನು, ವೇದಕಾಲಿನ ಆರ್ಷ ಪದ್ಧತಿಯನ್ನೆ ಪುನರುಚ್ಚರಿಸಿ, ಹೇಳಿದ್ದಾರೆ ಈ ವೇದ ಸಂಸ್ಕೃತಿ ಸಮುದ್ಧರ್ತರು. ಮ್ಯಾಕ್ಸಮುಲರರೆ ಆದಿಯಾಗಿ (ಅವರನ್ನು ಮೋಕ್ಷ ಮುಲ್ಲರ್ ಎಂದೂ ಕೊಂಡಾಡಿದ ಸ್ವಾಂತಿಕೆ ಇಲ್ಲದ ಭಾರತೀಯರುಂಟು.) ಪಾಶ್ಚಾತ್ಯ ಪ್ರಭೃತಿಗಳು ಕಂಡ ವೇದ ದರ್ಶನದ ಬಣ್ಣವನ್ನು ಬದಲಿಸಿ ಭಾರತೀಯರ ಕಣ್ಣು ತಿಳಿಯಾಗುವಂತೆ ವೇದಗಳನ್ನು ಪುನರಪಿ ಅರ್ಥೈಸಿ ಅವುಗಳನ್ನು ಪುನರಪಿ ವಿಷಯಾನುಕ್ರಮದಲ್ಲಿ ವಿಂಗಡಿಸಿ 'ವೇದ ಸಂಸ್ಕೃತಿ ಪರಿಚಯ' ಎಂಬ ಮಾಲಿಕೆಯಲ್ಲಿ ಹತ್ತು ಪರಿಮಳ ಪುಷ್ಪಗಳನ್ನು ಹೆಣೆದಿರುವ ನಮ್ಮ ಪೂಜ್ಯ ನಾರಾಯಣಾಚಾರ್ಯರು ಇಂದಿನ ಕಾಲದಲ್ಲೂ ಭಗವಾನ್ ವೇದವ್ಯಾಸರು ಮಾಡಿದ ಕಾರ್ಯವನ್ನೆ ಮುಂದುವರಿಸಿದ್ದಾರೆ. "ಹತ್ತು ಸಂಪುಟಗಳಲ್ಲಿ ಸನಾತನ ವೈದಿಕ ಸಂಸ್ಕೃತಿಯ ಒಂದು ವಿಹಂಗಮ ನೋಟವಾದರೂ ಸಹ, ಇಂದಿನ ಭೀಷಣ ಸ್ಥಿತಿಯಲ್ಲಿ ನಮ್ಮ ಧರ್ಮದ ಬಗೆಗೆ ಅಪಚಾರ, ಅಪಪ್ರಚಾರ, ಅಜ್ಞಾನ, ಅನ್ಯಥಾಜ್ಞಾನ, ವಿಪರೀತ ಜ್ಞಾನಗಳು ನಮ್ಮನ್ನು ಸುತ್ತುವರೆದಿರುವ ಹಿನ್ನೆಲೆಯಲ್ಲಿ, ಜಿಜ್ಞಾಸುಗಳಿಗೆ ದೊರೆಯಬೇಕೆಂಬ ಉದ್ದೇಶ್ಯದಿಂದ ಅರಂಭಗೊಂಡ" ಈ ಮಾಲೆಯು ತನ್ನ ಇಷ್ಟಾರ್ಥವನ್ನು ಈಡೇರಿಸಿದೆಯೆಂದು ಗ್ರಂಥಕರ್ತನೊಡನೆ ನಾವೂ ಸಂತೋಷದಿಂದ ದನಿಗೂಡಿಸಬೇಕು. ಈ 'ವೇದ ಸಂಸ್ಕೃತಿಯ ಪರಿಚಯ'—ಅದರ ಶೀರ್ಷಿಕೆಗಳು ಸೂಚಿಸುವಂತೆ—ವೇದಗಳು, ವೇದಸೂಕ್ತಗಳು ಅವುಗಳ ಯಥಾವತ್ತಾದ ಅನುವಾದ ಇಷ್ಟಕ್ಕೆ ಸೀಮಿತವಾಗಿರದೆ ವೇದಗಳಲ್ಲಿ ಸ್ತುತಿಸಲ್ಪಟ್ಟ ಭೂಮಿ, ಅಂತರಿಕ್ಷ, ಸ್ವರ್ಗದೇವತೆಗಳ ಪರಿಚಯದೊಡನೆ ಇಂದ್ರ, ಅಗ್ನಿ, ಅಪ್, ಅಂಭೃಣಿ, ಮಹಾಲಕ್ಷ್ಮಿ, ಮಹಾವಿಷ್ಣು ಮೊದಲಾದ ದೇವತೆಗಳು ಪ್ರತೀಕಿಸುವ ಆಧ್ಯಾತ್ಮಿಕ ಮಹತ್ವವನ್ನೂ ಕುರಿತು ತಮ್ಮದೇ ಆದ ಮನ-ವರಿಕೆಯ ಮಾರ್ಮಿಕ ಶೈಲಿಯಲ್ಲಿ ಸಂಶೋಧನೆಯ ಬೆಳಕು ಚೆಲ್ಲುತ್ತ ವಿದ್ವತ್ ಪ್ರಚುರವಾಗಿ ವಿವೇಚಿಸಿದ್ದಾರೆ. ಈಗ ಮುಂದಿನ ಹತ್ತು ಸಂಪುಟಗಳ ಹೊಸದೊಂದು ಮಾಲಿಕೆಯನ್ನು ಇದೇ 'ವೇದ ಸಂಸ್ಕೃತಿ ಪರಿಚಯ'ದ ಶೀರ್ಷಿಕೆಯಲ್ಲಿ ಹೊಳಹು ಹಾಕಿದ್ದಾರೆ. ಆ ಮೇರೆಗೆ ಮುಂಬರುವ ಸಂಪುಟಗಳಲ್ಲಿ

೧ ವೇದದಲ್ಲಿ ಕರ್ಮ, ಧರ್ಮ, ವರ್ಣವಿಚಾರ
೨ ಬೃಹಸ್ಪತಿ ಬ್ರಹ್ಮಣಸ್ಪತಿ ವಿಚಾರ
೩ ಉಷೋದೇವಿ
೪ ಉದಕಶಾಂತಿ (ಯಾಜುಷ) ಮಂತ್ರಗಳು, ಮೂಲ (ಸಸ್ವರ) ಅರ್ಥ ವಿವರಣೆ ಮತ್ತು ವಿವೇಚನೆ
೫ ಆರುಣದ ಸಾಂಕೇತಿಕ ವಿವರಣೆ
೬ ಭಾರದ್ವಾಜ ಋಷಿಗಳು ಮತ್ತು ಅವರ ಮಂತ್ರಗಳ ವಿವೇಚನೆ
೭ ಅಥರ್ವವೇದೀಯ ಲೋಕೋಪಯುಕ್ತ ವಿಚಾರಗಳು
೮ ವೈದಿಕ ಯಜ್ಞ, ಯಾಗಗಳ ಸಾಂಕೇತಿಕಾರ್ಥ ವಿವೇಚನೆ
೯ ವೇದದಲ್ಲಿ ಸೃಷ್ಟಿ ವಿಚಾರ ಸೂಕ್ತಗಳನ್ನು ಕುರಿತ ಸಮನ್ವಯ ವಿವೇಚನೆ
೧೦ ಹತ್ತು ಮುಖ್ಯ ವೈದಿಕ ಋಷಿಗಳು

ಹೀಗೆ ನಮ್ಮ ವೇದವಿದ್ಯೆಯನ್ನು ಇಪ್ಪತ್ತೂ ಸಂಪುಟಗಳಲ್ಲಿ ನೀಡಿದ ಮೇಲೆ ಇಂತಹ ಒಂದು ಯತ್ನ ಭಾರತವರ್ಷಕ್ಕೆ ಏಕಮೇವ ಕೊಡುಗೆ, ಏಕಮೇವ ಕಾಣ್ಕೆಯಾಗಬಹುದು. ಇಂತಹ ಒಂದು ಸಾಹಸ ಒಬ್ಬ ವ್ಯಕ್ತಿಯಿಂದ ನಡೆಯುತ್ತಿರುವುದು ನಮ್ಮ ಸರಕಾರಗಳಿಗೆ, ವಿಶ್ವವಿದ್ಯಾಲಯಗಳಿಗೆ, ಅಕಾಡೆಮಿಗಳಿಗೆ, ಸಂಘ-ಪರಿಷತ್ತುಗಳಿಗೆ ಒಂದು 'eye-opener' ನೇತ್ರ ಚಿಕಿತ್ಸೆ-ಇದ್ದಂತೆ.

★ ★ ★

ಪ್ರೊ. ನಾರಾಯಣಾಚಾರ್ಯರು ವೇದದ ಬಗೆಗಷ್ಟೆ ಪ್ರಮಾಣ ಪುರುಷರಲ್ಲ. ಅವರ ವಿದ್ಯುತ್ ಸಮಾನ ವಿದ್ವತ್ತು ಸಪ್ತವರ್ಣಗಳನ್ನು ಪ್ರತಿಫಲಿಸುವ ಒಂದು ಪ್ರಿಜಂ-ಗಾಜು ಇದ್ದಂತೆ. ಅವರ ವಾಗ್ಮಿತೆ, ಅವರ ವಿನೋದ ಪ್ರಜ್ಞೆ, ವ್ಯಂಗ್ಯಹಾಸ್ಯ, ಸಮರ್ಥ ಲೇಖನ ವೈಖರಿ, ಸಂಶೋಧಕ ಬುದ್ಧಿ, ಸಮಯ ಸಮಕಾಲೀನ ಪ್ರಜ್ಞಾ ವಿವೇಕ, ಪ್ರಗಲ್ಭ ಪಾಂಡಿತ್ಯದ ಪ್ರವಚನ ಶೈಲಿ, ಸನಾತನ ಶ್ರದ್ಧೆ, ಅರ್ವಾಚೀನ ಜ್ಞಾನ-ವಿಜ್ಞಾನಗಳ ಒಂದು ಸಮನ್ವಯ ತೂಕ-ಆದರೂ ಸನಾತನ ಶ್ರದ್ಧೆಯೆ ಪ್ರಧಾನವಾದ ವಿಚಾರ ಪ್ರಣಾಳಿ ಅತ್ಯಾಧುನಿಕ ಇಂಗ್ಲೀಷ್ ಕಾವ್ಯ-ಸಾಹಿತ್ಯಗಳ ಬಗೆಗೆ ಇರುವ ಅಧಿಕಾರ ಇವೆಲ್ಲವುಗಳ ವರ್ಣವಿಭ್ರಮವನ್ನು ಅವರ ವಿದ್ವತ್ತಿನ ಪ್ರಿಜಂನಲ್ಲಿ ವೈಭವ ಪೂರ್ಣವಾಗಿ ಕಾಣುತ್ತೇವೆ. ಈ ಸಂದರ್ಭದಲ್ಲಿ ಮೈಸೂರ ವಿಶ್ವವಿದ್ಯಾಲಯದ ತತ್ವಜ್ಞಾನ ವಿಭಾಗದ ಮುಖ್ಯಸ್ಥರಾದ ಪ್ರೊ. ಎಸ್. ಎಸ್. ರಾಘವಾಚಾರ್ ಅವರ ನುಡಿಮುತ್ತುಗಳನ್ನು ಮತ್ತೆ ಮತ್ತೆ ನೆನೆಯುವ ಚಪಲವಾಗುತ್ತದೆ.

"Prof. Narayanachar is a phenomenon in many significant ways. He is an outstanding Professor of English Literature, with enviable equipment in the field, with deep understanding of the latest achievements in English poetry such as that of T. S. Eliot. If this is just a high degree of professional distinction in his specialisation, he has added to this many more dimensions of attainment by his own choice and devoted and penetraiting study. He is a student of remarkable depth and width in Sanskrit studies. The wide range of knowledge has shaped him into a passionate and powerful champion of what may be described as the Religio philosophical spirit of Indian Culture. He is an ardent and thorough going student of Vedic literature which has led him to Vishistadwaitic Vaishnavism, a

spiritual tradition, for placing him in which he is deeply thankful to provi-dncee. He has mastered all the connected literature in all its principal languages. This acquisition of the great heritage has fired him, as it were, to throw himself, with abandon to the propogation of it with exceptional powers of discourse and writing..."

ಹೀಗೆ ಪ್ರೊ. ನಾರಾಯಣಾಚಾರ್ಯರ ಇಂಗ್ಲೀಷ್ ಭಾಷಾ ಸಾಹಿತ್ಯಗಳ ಪ್ರಭುತ್ವ, ಇಂಗ್ಲಿಷ್ ನವ್ಯ ಕವಿ ಟಿ. ಎಸ್. ಎಲಿಯಟ್‌ನ ಬಗ್ಗೆ ಅವರಿಗಿರುವ ಆಳವಾದ ಅಭ್ಯಾಸ ಮತ್ತು ಅಧಿಕಾರವಾಣಿ, ಸಂಸ್ಕೃತ ಅಭ್ಯಾಸವನ್ನು ತಲಸ್ಪರ್ಶಿಯಾಗಿ ಅವರು ಅಧ್ಯಯಿನಿಸಿರುವ ಅದ್ಭುತ ರೀತಿ, ಭಾರತೀಯ ಸಂಸ್ಕೃತಿಯನ್ನು ಧಾರ್ಮಿಕ-ದಾರ್ಶನಿಕ ದೃಷ್ಟಿಯಿಂದ ಎತ್ತಿ ಹಿಡಿವ ಭಾರತಪ್ರಜ್ಞೆ ಮೊದಲಾದ ಗುಣಗಳನ್ನು ಸಮುಚಿತವಾಗಿ ಮೆಚ್ಚಿಕೊಂಡಿದ್ದಾರೆ. ಇದಲ್ಲದೆ ವೇದವಾಙ್ಮಯವನ್ನು ತತ್ಸಂಬಂಧವಾದ ದಾರ್ಶನಿಕ ಸಾಹಿತ್ಯವನ್ನು ಆತ್ಮಸತ್ತಾಗಿ ಮಾಡಿಕೊಂಡು ಅದರ ಪ್ರಚಾರಕ್ಕಾಗಿ ವೇದಿಕೆಗಳನ್ನು ಲೇಖನಿಯನ್ನು ಬಳಸಿಕೊಂಡಿದ್ದಾರೆಂಬ ಅಂಶಗಳನ್ನು ಪ್ರಶಂಸಿಸಿ ನಿಜವಾಗಿಯೂ ಒಂದು ಸೇವೆಯನ್ನೇ ಮಾಡಿದ್ದಾರೆ—ಜನರ ಕಣ್ಣು ತೆರೆಯಿಸುವ ಸೇವೆ.

ಪ್ರೊ. ನಾರಾಯಣಾಚಾರ್ಯರ ಜ್ಞಾನ ಸಂಪತ್ತಿನ ಇನ್ನೊಂದು ಆಯಾಮವನ್ನು ಕುರಿತು ಇಲ್ಲಿ ನಾಲ್ಕು ಮಾತು ಹೇಳಲೇಬೇಕು. ಅದೆಂದರೆ ಅವರ ರಸವತ್ತಾದ ಪ್ರವಚನ ಮಾರ್ಗ. ರಾಮಾಯಣ ಮಹಾಭಾರತಗಳನ್ನು ಪ್ರವಚನಿಸುವಲ್ಲಿ ಈ ರಸಋಷಿಗಳು ಕಲೆ, ಕಾವ್ಯ, ಪ್ರತಿಭೆ, ಅಪ್ರತಿಮ ಪಾಂಡಿತ್ಯಗಳನ್ನು ಒಂದೇ ಸೃಜನ ವೇದಿಯಲ್ಲಿ ಸಂಗಡಿಸಿರುತ್ತಾರೆ. ಇತ್ತೀಚೆಗೆ (೧೯೮೭ ಮಾರ್ಚ್, ೧೨ ರಿಂದ ಏಪ್ರಿಲ್ ೫ರ ವರೆಗೆ) ೨೫ ದಿನಗಳವರೆಗೆ ಅವರು ಮಹಾಭಾರತ ಕುರಿತು ಪ್ರವಚನ ಮಾಡಿದರು. "ಕುಮಾರವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವುದು" ಎಂದು ಕವಿ ಕುವೆಂಪು ಹೇಳಿದ್ದರೆ ಪ್ರೊ. ನಾರಾಯಣಾಚಾರ್ಯರು ಪ್ರವಚನಿಸಿದಾಗ ಧಾರವಾಡವೆಲ್ಲಾ ದ್ವಾಪರವಾಗಿತ್ತು. ಬಯಲು ನಾಟ್ಯಗೃಹವು ಇಂದ್ರಪ್ರಸ್ಥವಾಗಿತ್ತು, ರಾಜಸೂಯ ಯಜ್ಞಶಾಲೆಯಾಗಿತ್ತು, ದ್ವೈತವನವಾಗಿತ್ತು, ವಿರಾಟ ನಗರವಾಗಿತ್ತು, ಉಪಪ್ಲವ್ಯಪುರವಾಗಿತ್ತು, ಕುರುಕ್ಷೇತ್ರವಾಗಿತ್ತು, ವೈಶಂಪಾಯನ ಸರೋವರವಾಗಿತ್ತು.

ಕವನದಲಿ ಕೈಯಾರೆ ದೈತ್ಯರ
ಸದೆದು ಭೂಭಾರವನು, ಪರಹ
ಸ್ತದಲಿ ಕಟ್ಟಿಸಿ ಕೊಟ್ಟ ಭಾಷೆಯನುತ್ತರಾಯಿ ಎನಿಸಿ
ನದಿಯ ನಂದನನು ಪರಾನಂ
ದದಲಿ ಸೇರಿಸಿ ಪರಮ ಪರಿತೋ
ಷದಲಿ, ಪಯಣವ ಮಾಡಿದನು ಮುರವೈರಿ ನಿಜಪುರಿಗೆ ॥

ಎಂದು ಸಾರಿದ ಕವಿ ಕುಮಾರವ್ಯಾಸನಿಗೆ ಮಹಾಭಾರತ ನಾಯಕ ಶ್ರೀ ಕೃಷ್ಣನೆ. ಅದು ಕೃಷ್ಣಕಥೆ. ಪ್ರಾ. ನಾರಾಯಣಾಚಾರ್ಯರ ಮಹಾಭಾರತ ವಿವೇಚನೆ ವ್ಯಾಸ, ಕುಮಾರವ್ಯಾಸರ ಸಮಸಮ ನಿರೂಪಣೆಗಳೊಂದಿಗೆ ಒಂದು ತೌಲನಿಕ ಅಭ್ಯಾಸವಾಗಿತ್ತು. ಜೊತೆಗೆ ಭಾರತ ಚಂಪೂಕಾವ್ಯ, ಭಾಸನ ನಾಟಕ, ನೀಲಕಂಠೀಯ ವ್ಯಾಖ್ಯಾನಗಳ ಸೋದಾಹರಣ ರಸಾಯನವಾಗಿತ್ತು. ಆಚಾರ್ಯರು ಯಾವ ಒಂದು ಶ್ರದ್ಧೆಯಿಂದ ಮಹಾಭಾರತ ಕಥೆಯನ್ನು ಭಾರತ ಯುದ್ಧ ಪೂರ್ತಿ ಧರ್ಮರಾಯನ ಪಟ್ಟಾಭಿಷೇಕದ ವರೆಗೆ, ಅಷ್ಟೇ ಅಲ್ಲ, ಒಂದು ಸಿಂಹಾವಲೋಕನ ಕ್ರಮದಿಂದ ಸ್ವರ್ಗಾರೋಹಣದವರೆಗೆ ನಿರೂಪಿಸಿದ-

ರೆಂದರೆ—ಭಾರತ ಯುದ್ಧದ ಒಂದೊಂದೆ ಕೌರವ ಸೇನಾಪತ್ಯ ಕಳಚಿ ಧರೆಗುರುಳಿದಾಗ ಇಲ್ಲಿ ಬಯಲಂ ನಾಟ್ಯವಲ್ಲಿ ಒಂದೊಂದು ನಾರಿಕೇಳ ಸ್ಫೋಟವಾಗುತ್ತಿತ್ತು.

ಇಪ್ಪತ್ತೈದು ದಿನಗಳ ಈ ಒಂದು ಜ್ಞಾನಸತ್ರ ನಡೆದು ಮಂಗಳ ಹೇಳಿದಾಗ–ಇನ್ನು ಈ ವೈಭವದ ಇಪ್ಪತ್ತೈದು ದಿನಗಳು ಮುಗಿದುವಲ್ಲ ಎಂಬ ನೋವಿನ ಅಗಲಿಕೆಯ ನೆನವು ನಮಗೆಲ್ಲಾ ಚುರುಕು ಕೊಟ್ಟಿತ್ತು. ಮಂಗಲದ ಮುಕ್ತಾಯದ ಮರುದಿನ ಆವರೆಗೆ ಧಾರವಾಡದ ಆ ಬಯಲಂ ಸಾವಿರಾರು ಭಕ್ತರ ಆಲಯವಾಗಿದ್ದುದು ಬಿಕೋ ಎನ್ನುತ್ತಿತ್ತು. ಆ ಬಯಲು ಸುಳಿಗಾಳಿಯ ತೇರನೇರಿ ಚಿರಂಜೀವಿ ಅಶ್ವತ್ಥಾಮನ ಪ್ರೇತ ಮರದಿಂದ ಮರಕ್ಕೆ ಸಂಚರಿಸುತ್ತಿದೆಯೇನೋ ಎಂಬ ಭ್ರಾಂತಿ ಉಂಟಾಗುವಂತಿತ್ತು.

ಈ ಮಹಾಭಾರತ ಪ್ರವಚನ ಪರ್ವಕ್ಕೆ, ಸುಮಾರು ಹದಿನೆಂಟು ವರುಷ ಪೂರ್ವದಲ್ಲಿ ಆಚಾರ್ಯರ ನಿಲಯವಲ್ಲಿಯೇ ಜರುಗಿದ ರಾಮಾಯಣ ಪ್ರವಚನ ಸುಧೆಯನ್ನು ತಿಂಗಳಾನುಗಟ್ಟಲೆ ಹೊಟ್ಟೆತುಂಬ ಸವಿದ ತೃಪ್ತಿ ಈ ಲೇಖಕನಿಗೆ. ಆ ದಿನಗಳು ಇನ್ನು ಮತ್ತೆಬಾರವು. ಆ ರಾಮಾಯಣ ರಸ ಪ್ರವಚನ ಮತ್ತೆ ಜರುಗೀತು. ಆವರ ಆ ಪ್ರಥಮ ಶ್ರವಣದ ರೋಮ ಹರ್ಷಣೀಯ ರೋಚಕ ಸ್ಮೃತಿ, ಸ್ಮೃತಿ–ಯಾಗಿಯೇ ಉಳಿಯುವಂತಹವು. ಮುಖ್ಯವಾಗಿ ಆಗ ಜರುಗಿದ ಆ ರಾಮಾಯಣದ ಸವಿ ಸೊಗಸು ಎರಡು ಮಹಾ ಜೀವಗಳಿಂದಾಗಿ ಪ್ರತಿದಿನವೂ ಪುಲಕ ಪ್ರದವೆನಿಸುತ್ತಿತ್ತು. ಆ ಎರಡು ಮಹಾಜೀವ ಗಳೆಂದರೆ ವರಕವಿ ದ. ರಾ. ಬೇಂದ್ರೆ ಹಾಗೂ ರಸಜ್ಞ ಹೃದಯವಂತಿಕೆಯ ಡಾ. ಕಮಲಾಪೂರ ಬಿಂದು ರಾಯರು ಪ್ರತಿದಿನ ಬೆಳಿಗ್ಗೆ ಏಳುಗಂಟೆಯಿಂದ ಎಂಟೂವರೆಗಿನ ಆ ಒಂದೂವರೆ ಗಂಟೆಗಳ ಅವಧಿ–ಯೆಂದರೆ ನಮ್ಮನ್ನು ತ್ರೇತಾಯುಗಕ್ಕೆ ಕೊಂಡೊಯ್ಯುತ್ತಿದ್ದ ಅಮರಗಳಿಗೆಯಾಗಿರುತ್ತಿತ್ತು ಅದು. ಋಷಿ ಗಳ ಆ ವೃಕ್ಷಾಶ್ರಮಗಳು, ಆ ನದೀ–ತಟಾಕಗಳು ಆ ತಂಪು ಮರಗಳ ತೋಪು, ಆ ಉಲ್ಲಾಸದ ಮೃಗ ಗಳ ಸುಳಿದಾಟ, ಆ ವಶಿಷ್ಠರ ಕಾಮಧೇನು, ವಿಶ್ವಾಮಿತ್ರರ ಅಭಿಯೋಗಕ್ಕೆ ಹೂಂಕರಿಸಿದಾಗ ಉದ್ಭವಿಸಿದ ದೇವತಾ ಸಮೂಹ–ಒಂದೊಂದೂ ಒಂದು ಪುಣ್ಯಸ್ಮರಣೆ.

ಪ್ರತಿಪ್ರಾತಃ ಕಾಲ ರಾಮಾಯಣ ಪ್ರವಚನ ಪ್ರಾರಂಭವಾಗುತ್ತಿದ್ದ—

'ತಪಃಸ್ವಾಧ್ಯಾಯ ನಿರತಂ ತಪಸ್ವೀ ವಾಗ್ವಿದಾಂ ವರಂ
ನಾರದಂ ಪರಿಪ್ರಚ್ಛ ವಾಲ್ಮೀಕಿರ್ಮುನಿ ಪುಂಗವಂ' ॥

ಎಂಬ ಶ್ಲೋಕ ನಿತ್ಯದ ಒಂದು signature time ನಂತಿರುತ್ತಿತ್ತು. ಶ್ಲೋಕಗಳನ್ನೂ ಆಚಾರ್ಯರು ಅನುಭವಿಸಿ ಅನುಭವಿಸಿ ಹೇಳುತ್ತಿದ್ದ ಹದಗಾರಿಕೆ, ಆ ಧ್ವನಿಯ ಇಂಪು, ಉಚ್ಚಾರ ಸ್ಫುಟತೆ, ಆಯಾ ರಸಭಾವಕ್ಕೆ ತಕ್ಕ ರಾಗದ ಜೋಡಣೆ ಇವುಗಳ ಸಮುದಾಯದಿಂದ ಒಂದು ರಸಸೃಷ್ಟಿಯೆ ನಿರ್ಮಾಣ ವಾಗುತ್ತಿತ್ತು.

ರಾಮಾವತಾರ, ಸೀತಾ ಸ್ವಯಂವರ ಸನ್ನಿವೇಶಗಳು ಭಕ್ತಶ್ರೋತೃಗಳಿಗೆ ಪರ್ವದ ಘಟ್ಟಗಳಾಗಿ ರುತ್ತಿದ್ದವು. ಶ್ರೀರಾಮ ವನವಾಸ, ಯಾನ, ದಶರಥನ ಯಾತನಾಮಯ ಮರಣ, ತೈಲದಲ್ಲಿ ಆತನ ಕಳೇವರವನ್ನು ಕಾದಿಡುವಿಕೆ—ವನವಾಸದಲ್ಲಿ ಅತ್ರಿ–ಅನಸೂಯಾ ದರ್ಶನ, ಅನಸೂಯೆ ಸೀತೆಯ ಮುಖದಿಂದಲೆ ಸ್ವಯಂವರದ ಸುಖವಾರ್ತೆಯನ್ನು ಕೇಳುವದು, ಸೀತೆ ಅದನ್ನು ಆನಂದಿಸಿ ಹೇಳುವಾಗ ಶ್ರೀ ರಾಮಚಂದ್ರನು ಕಿವಿಗೊಟ್ಟು ಕೇಳುವದು—ಓ! ಒಂದೊಂದೂ ಅವಿಸ್ಮರಣೀಯ. ಆ ಜಟಾಯುವಿನ ಆತ್ಮಾಹುತಿ, ಶ್ರೀ ರಾಮಚಂದ್ರನು ಜಟಾಯು ಪಿತೃಸಮಾನನೆಂದು ಬಗೆದು ಜಟಾಯುವಿಗೆ ಪಿಂಡೋದಕ ತರ್ಪಣ ಮಾಡುವುದು, ವಿಭೀಷಣನು ಶ್ರೀ ರಾಮಚಂದ್ರನಲ್ಲಿ ಶರಣಾಗತಿ ಭಾವ ತೋರುವುದು, ಆ

ಸುಂದರಕಾಂಡದ ಅತಿ ಸುಂದರತೆ, ಹನುಮದ್ವಿಲಾಸ, ಯುದ್ಧಕಾಂಡ, ಶ್ರೀ ರಾಮಕಾಂಡ, ಶ್ರೀರಾಮ ಪಟ್ಟಾಭಿಷೇಕ-ಈ ಸನ್ನಿವೇಶಗಳನ್ನು ನೆನೆದುಕೊಂಡರೆ ಸಾಕು ಮೈಗೆ ಮುಳ್ಳು ಸಿಡಿದೇಳುತ್ತವೆ.

ವಿಷ್ಣುಸಹಸ್ರದಂತೆ ಶ್ರೀ ರಾಮಸಹಸ್ರವೊಂದನ್ನು ತಯಾರಿಸಿರಿ—ಎಂದು ಮೆಚ್ಚಿ ಮುಗ್ಧರಾದ ಬೇಂದ್ರೆಯವರು ಆ ದಿಸೆಯಲ್ಲಿ ತಮ್ಮ ಕಾಣಿಕೆಯೆಂದು ನೂರಾರು ರೂಪಾಯಿಯ ನೋಟನ್ನು ಪ್ರವಚನಕಾರರ ಕೈಗೆ ಹಾಕಿದರು. ಬಹುಶಃ ಅದರ ಅನುಸಾರವಾಗಿ 'ಶ್ರೀ ರಾಮಾಯಣ ಸಾಹಸ್ರೀ' ಮೂರು ಭಾಗಗಳು ಈಗ ಸಿದ್ಧವಾಗಿ ಶ್ರೀ ಮದ್ರಾಮಾಯಣದ ಕೂಟ ಶ್ಲೋಕಗಳಿಗೆ ತಲಸ್ಪರ್ಶಿಯಾದ ಹೊಸ ಹೊಸ ಆಯಾಮಗಳ ವಿವೇಚನೆ ನೀಡುವ ವಿಶ್ವಕೋಶ ರೂಪದಲ್ಲಿ ಈ ಸಾಹಸ್ರೀ ಸಾಹಸ ಮುಂದುವರಿಯುತ್ತಿದೆ.

ಪೂಜ್ಯ ಆಚಾರ್ಯರ ಗೀತಾ ಪ್ರವಚನ ಸತ್ರಕ್ಕೂ ಸಾಕ್ಷಿ ಭೂತನಾದ ಪುಣ್ಯಶಾಲಿ ನಾನು. ಆದರ ಮಂಗಳ ಕಾರ್ಯವೂ ವೈಭವ ಪೂರ್ಣವಾಗಿಯೇ ಜರುಗಿತು. ಗೀತೆಯ ಸ್ವಾರಸ್ಯವೆಲ್ಲವೂ ಧರ್ಮಕ್ಷೇತ್ರೇ ಕುರುಕ್ಷೇತ್ರೇ ಎಂಬ ಮೊದಲಿನ ಹಾಗು 'ಯತ್ರ ಯೋಗೇಶ್ವರಃ ಕೃಷ್ಣಃ' ಎಂಬ ಶ್ಲೋಕಗಳೆರಡರಲ್ಲಿಯೇ ರಹಸ್ಯವಾಗಿ ಅಡಕವಾಗಿರುವುದನ್ನು ಆಚಾರ್ಯರು ತೋರಿಸಿಕೊಟ್ಟಾಗ ಅವರ ಪ್ರತಿಭೆ ಸಾಮರ್ಥ್ಯಕ್ಕೆ ಮುಗ್ಧನಾಗಿ ಹೋದೆ.

ಶ್ರೀ 'ಎನ್ಕೆ' ಅವರು
(ಎನ್. ಕೆ. ಕುಲಕರ್ಣಿ, ಸಾಹಿತಿಗಳು)



# ಸಮಿತಿ

೧ ಅಧ್ಯಕ್ಷರು : ಡಾ. ಆರ್. ಸಿ. ಹಿರೇಮಠ,
ಮಾಜೀ, ಉಪಕುಲಪತಿಗಳು, ಕ. ವಿ. ವಿ.)
೨ ಉಪಾಧ್ಯಕ್ಷರು : ಡಾ. ಎಂ. ಎನ್. ತಾವರಗೇರಿ
ಶ್ರೀ ಪಿ. ಎಸ್. ಶೂರ್ಪಾಲಿ
ಛಾರ್ಟರ್ಡ್ ಆಕೌಂಟೆಂಟ್
ಶ್ರೀ ಎಂ. ಎನ್. ನರಸಿಂಹನ್
ಉಪ ಕಮಿಷನರ್, ವಾಣಿಜ್ಯ ತೆರಿಗೆ ವಿಭಾಗ
ಶ್ರೀ ಹರ್ಷ ದೇಸಾಯಿ (ಎಲ್ಮೇಕಾ)
ಶ್ರೀ ಬಿ. ಜಿ. ದೊಡಮನಿ
ಅಧ್ಯಕ್ಷರು, ಕಿರಾಣಿ ವರ್ತಕರ ಸಂಘ
ಪ್ರೊ ಎನ್. ವಜ್ರಕುಮಾರ್
ಜೆ. ಎಸ್. ಎಸ್. ಸಂಸ್ಥೆಗಳು
ಪ್ರೊ ಬಿ. ಬಿ. ಕಣವಿ (ಕ. ಕಲಾ. ಮ. ವಿದ್ಯಾಲಯ)
೩ ಸದಸ್ಯರು : ಡಾ. ವ್ಹಿ. ಜಿ. ಕುಲಕರ್ಣಿ
ಶ್ರೀ ಎಸ್. ಆರ್. ಮೋರೆ
ಮಾಜಿ ಎಂ. ಎಲ್. ಎ.

ಡಾ. ಆನಂದ ಕಬ್ಬೂರ
ಶ್ರೀ ಎನ್. ಕೆ. ಕುಲಕರ್ಣಿ (ನೈಕ್ರೋಂ)
ಶ್ರೀ ಟಿ. ಎಲ್. ಗಾಂವ್‌ಕರ್
(ಸಗಟು ವ್ಯಾಪಾರಿಗಳು)
ಶ್ರೀ ನಾರಾಯಣರಾವ್ ಟಿಕಾರೇ
ಶ್ರೀ ಬಿ. ಆರ್. ನಾಗರಾಜರಾವ್
(ಇನ್‌ಕಂ ಟ್ಯಾಕ್ಸ್ ಸಲಹೆಗಾರರು)
ಶ್ರೀ ಎಂ. ಎಂ. ರೀಗೆ (ಪ್ರೀತಂ ಏಜನ್ಸೀ)
ಶ್ರೀ ಶಿವಕುಮಾರ್ ಕುಲಕರ್ಣಿ
(ಗೌರೀಶಂಕರ ಪುಸ್ತಕಾಲಯ)
ಶ್ರೀ ಎಸ್. ಬಿ. ಗುತ್ತಲ
(ಎ. ಇ. ಇ. ಹು. ಧಾ. ಮ. ನ. ಸಭೆ)
ಶ್ರೀ ಆನಂದ ಬಿ. ಕಮಲಾಪುರ (ಟ್ರೈವಾಕ್)
ಶ್ರೀ ಎಂ. ಎನ್. ಹುದ್ದಾರ
(ಎ. ವಿ. ಅ್ಯಂಡ್ ಕಂಪನಿ)
ಶ್ರೀ ವ್ಹಿ. ಕೆ. ಹಾವನೂರ
(ಬ್ಯಾಂಕರ್ಸ್ ಕಲ್ಚರಲ್ ಅಕಾಡೆಮಿ)

ಕಾರ್ಯದರ್ಶಿ : ಡಾ. ಇ. ಸಂಪತ್ಕುಮಾರ್
(ಮುಖ್ಯಸ್ಥರು : ಗಣಿತಶಾಸ್ತ್ರ ವಿಭಾಗ, ಕ. ವಿ. ವಿ. ಧಾರವಾಡ)